# ಪಂಚಮ

ಸಂಪುಟ : 8 ಮೇ .1984 ಬೆಲೆ 1-00 ಸಂಚಿಕೆ : 8-9

ಕೊಲೆ ಸುಲಿಗೆಗಳಿಗೆ ಹೆಸರಾದ ಚಿಕ್ಕಮಗಳೂರು ಜಿಲ್ಲೆಯಲ್ಲಿ ನೊಂದ ಜನರನ್ನೆಲ್ಲ ಕೂಡಿಸಿ ದಲಿತಸಂಘರ್ಷ ಸಮಿತಿ ಕಟ್ಟಿಬೆಳೆಸಿದ ಗಂಗಯ್ಯ ಮತ್ತು ಭದ್ರಯ್ಯ ಗೆಳೆಯರು ಮೊನ್ನೆ ತಮ್ಮ ಸಂಗಾತಿಗಳನ್ನು ಉಡುಕಿಕೊಂಡು ತಾಳಿ ಕಟ್ಟು ಕಟ್ಟಲೆಗಳನ್ನು ಮೀರಿ ಸರಳವಾಗಿ ಮದುವೆಯಾದರು.

## ತಾಳಿಕಟ್ಟು ಕಟ್ಟಲೆಗಳ ಮೀರಿ ಗಂಗಯ್ಯ ಗೆಳೆಯರ ಮದುವೆ

ಹಿಂದೂ ಧರ್ಮದ ಜಿಡ್ಡು ಗಟ್ಟಿರುವ ಎಲ್ಲಾ ಧಾರ್ಮಿಕ ಸಂಪ್ರಾಯಿಕ ಸಂಕೋಲೆ-ದಾಸ್ಯಗಳಿಂದ ದೂರವಾಗಿ ಅಂದಕಾರ ಮೂಢನಂಭಿಕೆಗಳಿಂದ ಮುಕ್ತರಾಗಿ ಯಾವುದೆ ಕಾಲವನ್ನು ನೋಡದೆ ಚಿಕ್ಕಮಗಳೂರು ಪ್ರಗತಿಪರ ವಿವಾಹ ಸಮಿತಿಯಡಿಯಲ್ಲಿ 3 ಜೊತೆ ಗಂಡು-ಹೆಣ್ಣುಗಳು ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನವ ದಾಂಪತ್ಯ ಜೀವನಕ್ಕೆ ಕಾಲಿಟ್ಟವು. ದಿನಾಂಕ 22-4-84 ರಂದು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ರಾಜ್ಯ ಕಾರ್ಯನಿರ್ವಾಹಕ ಬಿ.ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಬದಲ್ಲಿ ಎನ್. ವೆಂಕಟೇಶ ಮತ್ತು ಜಿಲ್ಲಾ ರೈತ ಸಂಘದ ಕಾರ್ಯದರ್ಶಿ ಸಿ. ಪಿ. ಪ್ರಕಾಶ್ ಮಾತನಾಡಿದರು. ವಿಲ್ಲಾರೂ ವರದಕ್ಷಿಣೆ ವಿರುದ್ಧ ಕಿಡಿಕಾರಿದರು. ಪುರುಷರು-ಸ್ತ್ರೀಗಿಂತ ಮೇಲು ಎಂಬುದನ್ನು ತಿರಸ್ಕರಿಸಿ ಮನುಷ್ಯರೆಲ್ಲ ಸಮಾನರು ಎಂದು ಸಾರಿದರು. ಬಿ. ಕೃಷ್ಣಪ್ಪನವರು ಮಾತಾನಾಡಿ ಜೋತಿಷ್ಯರು ಎಷ್ಟೊ ಗಂಡು-ಹೆಣ್ಣುಗಳ ಪರಸ್ಪರ ಪ್ರೀತಿ ವಿಶ್ವಾಸಗಳನ್ನು ಬೆಳೆಯದಂತೆ ಚಿವುಟಿ ಹಾಕಿರುವುದನ್ನು ಖಂಡಿಸಿ, ಕಾಲವು ನಿರ್ಗುಣ, ಇದರಲ್ಲಿ ರಾಹುಕಾಲ-ಗುಳಿಕ ಕಾಲಗಳನ್ನು ನೋಡುವ ಅಗತ್ಯವಿಲ್ಲವೆಂದು ಹೇಳಿದರು. ನನ್ನ ಹೆಂಡತಿ ಎಂದು ಕಟ್ಟುವ ಮಾಂಗಲ್ಯದ ಅಗತ್ಯವಿಲ್ಲವೆಂದು ತಿಳಿಸಿ ಎಷ್ಟೊ ತಾಳಿ ಕಟ್ಟಿ, ಅಗ್ನಿ ಸುತ್ತಿ ಮದುವೆಯಾದ ಸಂಸಾರಗಳು ಇಂದು ಕದನದಲ್ಲಿ ಪಾಲುಗೊಂಡಿರುವುದನ್ನು ವಿವರಿಸಿದರು. ನಮಗೆ ಪರಸ್ಪರ ಪ್ರೀತಿ ವಿಶ್ವಾಸಗಳೇ ಮಾಂಗಲ್ಯದ ಗುರುತು ಎಂದು ತಿಳಿಸಿದರು.

ಈ ನವ ದಂಪತಿಗಳೆಂದರೆ ಎಂ. ಡಿ. ಗಂಗಯ್ಯ ಮತ್ತು ಕೆ.ಉಷಾದೇವಿ, ಕೆ.ಭದ್ರಯ್ಯ ಮತ್ತು ಗೌರಮ್ಮ, ಕೆ.ಆರ್. ಶಿವಣ್ಣ ಮತ್ತು ಲತಾ. ಇವರುಗಳ ತಂದೆ ತಾಯಿಗಳನ್ನು ಈ ಕೆಳಗಿನ 2 ಪ್ರಶ್ನೆಗಳನ್ನು ಇದ್ದು ಅವರುಗಳ ಅನಿಸಿಕೆ ಈ ರೀತಿ ಇರುತ್ತೆ.

ಪ್ರಶ್ನೆ: 1—"ಈ ದಿನದ ಮದುವೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ?

2. ಇನ್ನು ಮುಂದೆ ಮದುವೆಯಾಗುವವರಿಗೆ ನಿಮ್ಮ ಸಲಹೆ ಏನು?"

ಗಂಗಯ್ಯನವರ ತಾಯಿ ಮರಿಯಮ್ಮನವರು ಮೊದಲನೆಯ ಪ್ರಶ್ನೆಗೆ :—ನನ್ನ ಮಗ ಮತ್ತು ಸೊಸೆ ಸುಖವಾಗಿರಲಿ. ಅವರು ಎಲ್ಲೇ ಬದುಕುವುದಕ್ಕೆ ನಮ್ಮ ಪೂರ್ಣ ಸಹಕಾರ ಇದೆ.ಅವರು ಹೇಗೇ ಮದುವೆಯಾಗಲಿ ಚೆನ್ನಾಗಿದ್ದರೆ ಸಾಕು. 2ನೇ ಪ್ರಶ್ನೆಗೆ :—ಎಲ್ಲರೂ ಹೀಗೇ ಆದರೆ ಒಳ್ಳೆಯದು ನಮ್ಮ ಹಾಗೆ ಎಲ್ಲಾರ ತಂದೆ ತಾಯಿಗಳು ಒಪ್ಪ ಬೇಕಲ್ಲವೆ ಇದು ಅವರವರಿಗೆ ಬಿಟ್ಟಿದ್ದು. ಹೀಗೇ ಆಗಲಿ ಎಂದು ನನ್ನ ಅನಿಸಿಕೆ.

ಭದ್ರಯ್ಯನವರ ತಾಯಿ ಮಲ್ಲಮ್ಮ ಮೊದಲನೆ ಪ್ರಶ್ನೆಗೆ —ನನಗೇನು ಇಷ್ಟೊಂದು ಜನ ಸೇರಿರುವುದು ಸಂತೋಷವಾಗಿದೆ. ನಾವೇ ಶಾಸ್ತ್ರಗೀಸ್ತ್ರ ಅಂಥ ಮಾಡಿದ್ದರೆ ಇಷ್ಟು ಜನ ಸೇರುತ್ತಿರಲಿಲ್ಲ. ಅಲ್ಲದೆ ತಾಳಿ ಇಲ್ಲದೆ ಮೊದಲು ನನಗೆ ಸರಿ ಅನ್ನಿಸಲಿಲ್ಲ ಇಲ್ಲಿಗೆ ಬಂದು ನೋಡಿದಾಗ ಎಲ್ಲರೂ ಏಕೆ ಹೀಗೆ ಆಗಬಾರದು ಅನ್ನಿಸಿತು. 2ನೇ ಪ್ರಶ್ನೆಗೆ :—ನಾವು "ಗೆರೆ ತುದಿಯ ಮರ" ಇಂದೊ ನಾಳೆಯೊ ಸಾಯುತ್ತೇವೆ ಮುಂದೆ ಬದುಕುವವರು ಸುಖವಾಗಿ ಇರಬೇಕಲ್ಲವೇ ? ಆದ್ದರಿಂದ ಮದುವೆ ಆಗುವವರ ಇಷ್ಟದಂತೆ ಆದರೆ ಒಳ್ಳೆಯದು. ಹೇಗೆ ಬೇಕಾದರೂ ಮದುವೆಯಾಗಲಿ ಒಟ್ಟಾರೆ ನಮ್ಮ ಆಶೀರ್ವಾದ ಸುಖವಾಗಿರಲಿ ಅನ್ನುವುದು. ಗೌರಮ್ಮನವರ ತಂದೆ ಉದ್ದಯ್ಯ ಮೊದಲನೆ ಪ್ರಶ್ನೆಗೆ:—"ಇವತ್ತೇನೊ ನಗುನಗುತ್ತಾ ಮದುವೆಯಾಗಿದ್ದಾರೆ" ಮುಂದೆ ಅವರು ಹೇಗೆ ಬದುಕುತ್ತಾರೆ ಕಾದು ನೋಡಬೇಕಾಗಿದೆ." ಎಂದರು

2ನೇ ಪ್ರಶ್ನೆಗೆ :—ಅವರವರು ಹೇಗೆ ಇಷ್ಟಪಡುತ್ತಾರೆ ಹಾಗೆ ಆಗಲಿ ಇದೇ ರೀತಿ ಸಾಮೂಹಿಕ ವಿವಾಹ ಆಗಲಿ ಎಂದು ನನ್ನ ಅನಿಸಿಕೆ ಎಂದರು.

ಲತಾರ ತಾಯಿ ಪುಟ್ಟಮ್ಮ ಮೊದಲನೆ ಪ್ರಶ್ನೆಗೆ ನಾವು ಆಂದರೆ ತಂದೆ ತಾಯಿಗಳು ತಾಳಿ ಇಲ್ಲದಿದ್ದ ಒಳ್ಳೆಯದು ಇವತ್ತಿನ ಮದುವೆ ನನಗೆ ಬಹಳ ಸಂತೋಷವಾಗಿದೆ ನನ್ನ ಮಗಳ ಮದುವೆಯ ಇಷೊಂದು ಜನ ನೋಡುತ್ತಾರೆ ಎಂದು ತಿಳಿದಿರಲಿಲ್ಲ. ಮುಂದೆ ಇವರು ಸುಖವಾಗಿರಲಿ ಎಂದು ಹಾರೈಸುತ್ತೇನೆ ಎಂದರು.—ಯು. ಮಂಜಯ್ಯ



‘ಅವಕಾಶಗಳ ಹಂಚಿಕೆಗೆ ಆದಷ್ಟು ಜಾತ್ಯಾತೀತ ಹೊಸ ಸೂತ್ರವೊಂದನ್ನು ರೂಪಿಸುವ ಅಗತ್ಯವಿದೆ. ಅಂಥ ಸೂತ್ರವು ...ರನ್ನು ಯೋಗ್ಯರನ್ನು ಸಾಧ್ಯವಾದಷ್ಟು ಮಟ್ಟಿಗಾದರೂ ಕರಾರುವಾಕ್ಕಾಗಿ ಗುರುತಿಸುವಂತಿರಬೇಕು. ಅತ್ಯಂತ ಬಡ ಅವಿದ್ಯಾ... ಬ್ರಾಹ್ಮಣನ ಅರ್ಹ ಮಗ ಅವಕಾಶದಿಂದ ವಂಚಿತನಾಗುವುದೂ, ಶ್ರೀಮಂತ ವಿದ್ಯಾವಂತ ಕೆಳಜಾತಿಯವನೊಬ್ಬನ ದಡ್ಡ ಮಗ ಜಾತಿಯೊಂದೇ ಕಾರಣಕ್ಕಾಗಿ ಅವಕಾಶ ಪಡೆಯುವುದೂ ಸಮಂಜಸವಲ್ಲ. ಮತ್ತು ಕ್ರಮೇಣವಾಗಿಯಾದರೂ ಜಾತಿಯ ಪ್ರಭಾವ ಕಡಿಮೆಯಾಗಬೇಕು. ಆ ಬಗ್ಗೆ ಹೆಚ್ಚಿನ ಯೋಚನೆ ನಡೆಯಬೇಕಾದ ಅವಶ್ಯಕತೆ ಇದ್ದು ತಾತ್ಕಾಲಿಕವಾಗಿ ಇಲ್ಲಿ ಸೂಚಿಸುವ ಸೂತ್ರವೊಂದನ್ನು ಗಮನಿಸಬಹುದು.

# ಮೀಸಲಾತಿ ನ್ಯಾಯಕ್ಕೊಂದು ಹೊಸಸೂತ್ರ

ಪ್ರತಿಯೊಂದು ದೇಶಕ್ಕೆ, ಆ ದೇಶದೊಳಗಿನ ವಿಭಿನ್ನ ಭಾಗಗಳಿಗೆ, ಬೇರೆ ಬೇರೆ ಸಮಸ್ಯೆಗಳಿರುತ್ತವೆ. ಒಂದು ವೇಳೆ ಸಮಸ್ಯೆಗಳ ಸ್ವರೂಪ ಒಂದೇ ಆದರೂ ಪರಿಹಾರಕ್ಕಾಗಿ ದೊರೆಯುವ ಸಂಪನ್ಮೂಲಗಳನ್ನು ಮತ್ತು ಪರಿಸರವನ್ನು ಅವಲಂಬಿಸಿ ಪರಿಹಾರೋಪಾಯಗಳು ಭಿನ್ನವೇ ಆಗಬಹುದು. ಸಿದ್ಧ ಸೂತ್ರವೊಂದನ್ನು ಎಲ್ಲಾ ಸಮಸ್ಯೆಗಳ ಪರಿಹಾರವೆಂದು ರೂಪಿಸಲು ಸಾಧ್ಯವಿಲ್ಲ.

ಜಾತಿ ಈ ದೇಶದ ವಿಶಿಷ್ಟ ಸಮಸ್ಯೆ. ಈ ರೀತಿಯ ವ್ಯವಸ್ಥೆಯನ್ನು ವಿಶ್ವದ ಇತರ ಭಾಗಗಳಲ್ಲಿ ನಾವು ಕಾಣಲಾರೆವು. ಇದರ ಜೊತೆಗೆ ಇತರ ದೇಶಗಳಲ್ಲಿರುವಂತೆ ಇಲ್ಲಿಯೂ ವರ್ಗ ವೈಪರೀತ್ಯಗಳನ್ನು ಕಾಣಬಹುದು. ಈ ದೇಶದಲ್ಲಿ ಜಾತಿ ಮತ್ತು ವರ್ಗ ಒಂದರೊಡನೊಂದು ಹೆಣೆದುಕೊಂಡು ಸಮಸ್ಯೆಯನ್ನು ಮತ್ತಷ್ಟು ಬಿಗಡಾಯಿಸಿವೆ. ಚಾರಿತ್ರಿಕವಾಗಿ ವಿದ್ಯೆ ಮತ್ತು ಆಸ್ತಿಯ ಒಡೆತನದಿಂದ ವಂಚಿತರಾದ ಶೂದ್ರರು ಮತ್ತು ಅತಿಶೂದ್ರರಲ್ಲಿ ಕೆಳವರ್ಗ ಹೆಚ್ಚು. ವಿದ್ಯೆ ಮತ್ತು ಆಸ್ತಿಯ ಏಕಸ್ವಾಮ್ಯವನ್ನು ದೀರ್ಘಕಾಲದವರೆಗೆ ಅನುಭವಿಸಿದ ಜಾತಿಗಳಲ್ಲಿ ಕೆಳವರ್ಗದ ಪ್ರಮಾಣ ಶೂದ್ರ ಜಾತಿಯಲ್ಲಿರುವಷ್ಟಿಲ್ಲ. ವಿದೇಶೀ ಆಡಳಿತ ಮತ್ತು ಶಿಕ್ಷಣ ಶೂದ್ರರಲ್ಲಿ ಮೇಲ್ವರ್ಗದ ಸೃಷ್ಟಿಗೆ ಕಾರಣವಾಗಿದ್ದು ಮೇಲ್ಜಾತಿಗಳಲ್ಲೂ ಬಡವರ್ಗ ಹುಟ್ಟಿಕೊಂಡಿದೆ.

ನಮ್ಮ ಗುರಿ ಸಮಾನತೆ ಮತ್ತು ಪ್ರಗತಿ. ಇದರಲ್ಲಿ ಒಂದು ಮುಖ್ಯ ಮತ್ತೊಂದು ಮುಖ್ಯವಲ್ಲ ಎನ್ನಲು ಸಾಧ್ಯವಿಲ್ಲ. ಸಮಾನತೆ ಇಲ್ಲದ ಸಮಾಜ ಸಾಧಿಸಿದ ಪ್ರಗತಿಯನ್ನಾಗಲೀ, ಮತ್ತು ಪ್ರಗತಿಯ ಗತಿಯನ್ನಾಗಲೀ ಬಹಳ ದಿನ ಉಳಿಸಿಕೊಳ್ಳಲಾರದು. ಸಮಾನತೆಯನ್ನು ಸಾಧಿಸುವ ಮೊದಲ ದಿನಗಳಲ್ಲಿ ಪ್ರಗತಿಯ ಗತಿ ಕುಂಠಿತಗೊಂಡರೂ ಅದು ಪ್ರಗತಿಯ ಮೂಲವನ್ನು ವಿಸ್ತರಿಸಿ ದೀರ್ಘಾವಧಿಯಲ್ಲಿ ಹೆಚ್ಚಿನ ಪ್ರಗತಿಗೆ ಕಾರಣವಾಗುತ್ತದೆ. ಪ್ರಗತಿಯ ಹೆಸರಿನಲ್ಲಿ ಸಮಾನತೆಯನ್ನು ಕಡೆಗಣಿಸಿದ ಸಮಾಜದಲ್ಲಿ ತಾತ್ಕಾಲಿಕವಾಗಿ ಪ್ರಗತಿಯ ವೇಗ ಹೆಚ್ಚಾಗಬಹುದಾದರೂ, ಅದು ಪ್ರಗತಿಯ ಮೂಲವನ್ನು ಸಂಕುಚಿತಗೊಳಿಸಿ ದೀರ್ಘಾವಧಿಯಲ್ಲಿ ಹಿಂದುಳಿಯುವಿಕೆಗೆ ಕಾರಣವಾಗುತ್ತದೆ.

ದೀರ್ಘ ಇತಿಹಾಸವನ್ನು ಹೊಂದಿರುವ ನಮ್ಮ ದೇಶ ಅತ್ಯಂತ ಹಿಂದುಳಿದ ದೇಶಗಳಲ್ಲಿ ಒಂದಾಗಿದ್ದರೆ ನಮ್ಮ ಪ್ರಗತಿಯ ಮೂಲ ಸಂಕುಚಿತವಾಗಿದ್ದುದು ಪ್ರಮುಖ ಕಾರಣ. ದೇಶದ ಶೇಕಡಾ 90 ಜನ ಶೂದ್ರರು ಮತ್ತು ಹೆಂಗಸರೆಂಬ ಕಾರಣಕ್ಕಾಗಿ ಅವಕಾಶಗಳಿಂದ ವಂಚಿತರಾದ ಕಾರಣ, ಭಾರತ ತನ್ನ ಪ್ರಗತಿಯ ಗತಿಯನ್ನು ಉಳಿಸಿಕೊಳ್ಳಲಾರದೇ ಹೋಯಿತು. ಯುರೋಪ್‌ನಲ್ಲಿ ಕಾಡುಜನರಿರುವಾಗಲೇ ಉತ್ತಮ ನಾಗರಿಕತೆಯನ್ನು ಹೊಂದಿದ ದೇಶ ಸಮಾನತೆಯ ಮೂಲಕ ಪ್ರಗತಿಯ ಮೂಲವನ್ನು ಹೆಚ್ಚಿಸಿದ್ದರೆ ಇಂದು ಮುಂದುವರೆದ ರಾಷ್ಟ್ರಗಳ ಮುಂಚೂಣಿಯಲ್ಲಿರಬೇಕಾಗಿತ್ತು.

ಈಗಲಾದರೂ ಅನುಕೂಲ ಮತ್ತು ಅವಕಾಶಗಳನ್ನು ಸಮನಾಗಿ ಹಂಚಿ ಪ್ರಗತಿಯ ಮೂಲವನ್ನು ವಿಸ್ತರಿಸಬೇಕು ಮತ್ತು ಪ್ರಗತಿಯ ಗತಿಯನ್ನು ಹೆಚ್ಚಿಸಬೇಕು. ಸಂಪನ್ಮೂಲಗಳು ಮತ್ತು ಅವಕಾಶಗಳು ಯಾವಾಗಲೂ ಮಿತವಾಗಿರುವುದರಿಂದ ಈ ಉದ್ದೇಶ ಸಾಧನೆಗೆ ಉತ್ತಮ ಹಂಚುವಿಕೆಯ ಸೂಕ್ತಕ್ರಮವನ್ನು ರೂಪಿಸಬೇಕು.

ಜಾತಿ ಈ ದೇಶದಲ್ಲಿ ಬಹಳ ಜನರನ್ನು ಅನೇಕ ದಿನಗಳವರೆಗೆ ಅವಕಾಶಗಳಿಂದ ವಂಚಿತರನ್ನಾಗಿ ಮಾಡಿದ್ದರಿಂದ ನಮ್ಮ ಸಂವಿಧಾನ ನಿರ್ಮಾಪಕರು ಜಾತಿಯಲ್ಲಿ ಅತ್ಯಂತ ಕೀಳು ಎಂದು ಗಣಿಸಿದ ಶೇಕಡಾ ಇಪ್ಪತ್ತೆರಡೂವರೆ ಜನರನ್ನು ಪರಿಶಿಷ್ಟದಲ್ಲಿ ಸೇರಿಸಿ ಅವರಿಗೆ ಜಾತಿಯ ಆಧಾರದ ಮೇಲೆ ವಿಶೇಷ ಸೌಲಭ್ಯಗಳನ್ನು ರಾಜಕೀಯವಾಗಿ, ಶೈಕ್ಷಣಿಕವಾಗಿ ಮತ್ತು ಔದ್ಯೋಗಿಕವಾಗಿ ಕಲ್ಪಿಸಿದರು. ಇದರ ಪರಿಣಾಮವೆಂದರೆ ಕಳೆದ 35 ವರ್ಷಗಳಲ್ಲಿ ಪ್ರಗತಿಯ ಮೂಲ ಸ್ವಲ್ಪ ಮಟ್ಟಿಗೆ ವಿಸ್ತರಿಸಿತು. ಇದುವರೆಗೂ ಶೇಕಡಾ 10ಕ್ಕಿಂತ ಕಡಿಮೆ ಜನರ ಏಕಸ್ವಾಮ್ಯವಾಗಿದ್ದ ರಾಜಕೀಯ ಶೈಕ್ಷಣಿಕ ಮತ್ತು ಔದ್ಯೋಗಿಕ ಅವಕಾಶಗಳ ಒಂದು ಭಾಗ ಅತ್ಯಂತ ಕೆಳ ಜಾತಿಯವರಿಗೂ ಸಿಗುವಂತಾಯಿತು. ಅಷ್ಟರ ಮಟ್ಟಿಗೆ ಪ್ರಗತಿಯ ಮೂಲ ವಿಸ್ತರಿಸಿತು. ಆದರೆ ಪ್ರಗತಿಯ ಮೂಲವಾಗಲೀ, ಗತಿಯಾಗಲೀ ನಿರೀಕ್ಷಿಸಿದಷ್ಟು ಹೆಚ್ಚಲಿಲ್ಲ. ಜಾತಿಯ ಹೆಸರಿನ ಮೇಲೆ ಸಿಗುವ ಸೌಲಭ್ಯಗಳು ಹೆಚ್ಚು ಕಮ್ಮಿ ನಗರವಾಸಿ ಶ್ರೀಮಂತ ಮತ್ತು ವಿದ್ಯಾವಂತ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಪಾಲಾದವು ಮತ್ತು ಆಗುತ್ತಲಿವೆ. ಆ ಜಾತಿಗಳಲ್ಲಿನ ಕೆಳವರ್ಗ ಹೆಚ್ಚು ಕಮ್ಮಿ ಮೊದಲೆಲ್ಲಿತ್ತೋ ಅಲ್ಲೇ ಇದೆ. ಶೇಕಡಾ ಇಪ್ಪತ್ತೆರಡೂವರೆ ಮಾತ್ರ ಮೀಸಲಾಗಿ ಉಳಿದದ್ದೆಲ್ಲಾ ಅರ್ಹತೆಯ ಆಧಾರದ ಮೇಲೆ ಹಂಚಲ್ಪಟ್ಟಿದ್ದರಿಂದ, ಈ ಹಿಂದೆ ವಿದ್ಯೆ ಮತ್ತು ಆಸ್ತಿಯ ಮೇಲೆ ಹಿಡಿತ ಹೊಂದಿದ ಜಾತಿಗಳ ಮೇಲ್ವರ್ಗ ಸರ್ಕಾರದ ಉದ್ಯೋಗ ಮತ್ತು ಸಂಸ್ಥೆಗಳಲ್ಲಿ ಸಿಂಹಪಾಲನ್ನೇ ತನಗೆ ಉಳಿಸಿಕೊಳ್ಳಲು ಸಮರ್ಥವಾಯಿತು. ಪರಿಶಿಷ್ಟ ಜಾತಿಗಳಿಗಿಂತ ಜಾತೀಯ ವ್ಯವಸ್ಥೆಯಲ್ಲಿ ಸ್ವಲ್ಪ ಮೇಲಿರುವ ಆದರೆ ಸಂಖ್ಯಾಬಲವೂ ಇಲ್ಲದ ಅಲ್ಪಸಂಖ್ಯಾತರು ಹೆಚ್ಚು ಕಮ್ಮಿ ಪೂರ್ಣ ನಿರ್ಲಕ್ಷ್ಯಕ್ಕೊಳಗಾದರು.

ಪ್ರಜಾ ಪ್ರಭುತ್ವ ಮೇಲ್ವರ್ಗದ ಸಂಖ್ಯಾ ಬಲ ಹೆಚ್ಚಿರುವ ಶೂದ್ರರ ಶಕ್ತಿಯನ್ನು ಹೆಚ್ಚಿಸಿತು. ಈ ರೀತಿಯ ಜಾತಿಗಳ ರಾಜಕೀಯ ಅಧಿಕಾರವನ್ನು ಮೇಲ್ಜಾತಿಯಿಂದ ಕಿತ್ತುಕೊಳ್ಳಲು ಸಮರ್ಥವಾದವು. ಪರಿಣಾಮವಾಗಿ ಶೈಕ್ಷಣಿಕ ಮತ್ತು ಔದ್ಯೋಗಿಕ ರಂಗದಲ್ಲೂ ಈ ಬಲಿಷ್ಟ ಶೂದ್ರ ಜಾತಿಯ ಮೇಲ್ವರ್ಗ ಪಾಲು ಪಡೆಯಿತು. ಸಂಖ್ಯಾಬಲ ಹೆಚ್ಚಿಲ್ಲದ ಶೂದ್ರರು ಮೂಕ ಪ್ರೇಕ್ಷಕರಾಗಿಯೇ ಉಳಿದರು. ಇವರಿಗೆ ತಮ್ಮ ಪ್ರತಿನಿಧಿಗಳನ್ನು ರಾಜಕೀಯವಾಗಿ ಆರಿಸುವಷ್ಟು ಸಂಖ್ಯಾಬಲವೂ ಇಲ್ಲ, ಪರಿಶಿಷ್ಟದಲ್ಲಿ ಸೇರಿಸದೇ ಇದ್ದದ್ದರಿಂದ ಸಂವಿಧಾನಾತ್ಮಕ ರಕ್ಷಣೆಯೂ ಇಲ್ಲ. ಈ ಜನರ ಸಂಖ್ಯೆ ಈ ದೇಶದ ಸುಮಾರು ಶೇಕಡಾ 40 ರಿಂದ

45 ರಷ್ಟು ಜನ ಇಂಥ ಜಾತಿಗಳಿಗೇ ಸೇರಿರುವುದು.

ಈ ಜನಾಂಗಗಳ ಮೇಲ್ವರ್ಗ ಅಲ್ಲಲ್ಲಿ ಅವಕಾಶಗಳ ಒಂದಂಶವನ್ನು ಪಡೆದಿರಬಹುದಾದರೂ ಕೆಳ ವರ್ಗ ಮಾತ್ರ ಹೆಚ್ಚು ಕಮ್ಮಿ ಪೂರ್ಣ ನಿರ್ಲಕ್ಷ್ಯಕ್ಕೊಳಗಾಯಿತು. ದಕ್ಷಿಣ ರಾಜ್ಯಗಳಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಪರಿಶಿಷ್ಟದಲ್ಲಿ ಇಲ್ಲದ ಹಿಂದುಳಿದ ಜಾತಿಗಳನ್ನು ಗುಂಪುಗಳನ್ನಾಗಿ ವಿಂಗಡಿಸಿ ಅವಕಾಶಗಳಲ್ಲಿ ಮೀಸಲಾತಿಯನ್ನು ಕಲ್ಪಿಸಿದ್ದರೂ, ಅಲ್ಪ ಸಂಖ್ಯಾತ ಜಾತಿಗಳು ಬಹು ಸಂಖ್ಯಾತರ ಮಧ್ಯೆ ಸೇರಿದ್ದು, ಅಲ್ಪ ಸಂಖ್ಯಾತ ಜಾತಿಗಳು, ರಾಜಕೀಯವಾಗಿ ಪೂರ್ಣವಾಗಿ ನಿರ್ಲಕ್ಷ್ಯಕ್ಕೊಳಗಾಗಿವೆ ಮತ್ತು ಇತರ ಅವಕಾಶಗಳಲ್ಲೂ ಸಿಗಬೇಕಾದ ಪಾಲು ಸಿಗುತ್ತಿಲ್ಲ.

ಜಾತಿ ಆಧಾರದ ಮೀಸಲಾತಿ ಮತ್ತು ಅರ್ಹತೆಯ ಆಧಾರದ ಮೇಲಿನ ಅವಕಾಶ ಹಂಚಿಕೆಯ ಪರಿಣಾಮವೆಂದರೆ, ಮೇಲ್ಜಾತಿಯ ಬಡವರು ಸಂಖ್ಯಾಬಲವಿರುವ ಶೂದ್ರರಲ್ಲಿನ ಬಡವರು, ಪಂಚಮರಲ್ಲಿನ ಬಡವರು ಮತ್ತು ಅಲ್ಪ ಸಂಖ್ಯಾತರು ಅವಕಾಶಗಳ ಪಾಲನ್ನು ಪಡೆಯಲು ಅಸಮರ್ಥರಾಗಿರುವುದು. ಒಟ್ಟಿನಲ್ಲಿ ದೇಶದ ಶೇಕಡಾ 70–80 ರಷ್ಟು ಪುನಃ ಅವಕಾಶಗಳನ್ನು ಪಡೆದು ಪ್ರಗತಿಯ ಕಾರ್ಯದಲ್ಲಿ ಭಾಗವಹಿಸುವಂತಿಲ್ಲ.

ಜಾತಿ ಮೀಸಲಾತಿಯ ಮತ್ತೊಂದು ಕೆಟ್ಟ ಪರಿಣಾಮವೆಂದರೆ, ಜಾತಿ ಬಲಿಷ್ಟವಾಗಿದ್ದು ಜಾತಿ ಆಧಾರದ ಮೇಲೆ ತಮಗೂ ಮೀಸಲಾತಿ ಬೇಕೆಂದು ಇತರ ಹಿಂದುಳಿದ ಜಾತಿಗಳೂ ಕೇಳತೊಡಗಿವೆ.

ಮೇಲ್ಜಾತಿಗಳಲ್ಲೂ ಜಾತೀಯ ಜಾಗೃತಿ ಹೆಚ್ಚಾಗಿದೆ. ಮೀಸಲಾತಿಯಿಂದ ತಮಗೆ ಇದುವರೆಗೂ ಬರುತ್ತಿದ್ದ ಅವಕಾಶಗಳಲ್ಲಿ ಒಂದಂಶ ಕಡಿಮೆಯಾಗಿದ್ದರಿಂದ ತಮ್ಮ ಪಾಲೇ ಹೋಯಿತೇನೋ ಎಂಬಂತೆ ಪ್ರತಿಭಟಿಸುತ್ತಿದ್ದಾರೆ. ಇಂದೂ ಅವಕಾಶಗಳನ್ನು ಹಂಚುವ ಸ್ಥಾನದಲ್ಲಿರುವ ಈ ಜನ ತಮ್ಮ ಜನಾಂಗದ ಹಿತರಕ್ಷಣೆಯಲ್ಲಿ ತೊಡಗಿದ್ದಾರೆ ತಪ್ಪೊ ಸರಿಯೋ ತಾವು ಒಗ್ಗಟ್ಟಾಗಿ ತಮ್ಮ ಜನಾಂಗದ ಹಿತರಕ್ಷಣೆ ಮಾಡಿಕೊಳ್ಳಬೇಕೆಂಬ ಭಾವನೆ ಅವರಲ್ಲಿ ಮೂಡುತ್ತಿದೆ. ಈ ವ್ಯವಸ್ಥೆಯಲ್ಲಿ ರಾಜಕೀಯ ಅಧಿಕಾರವಾಗಲೀ ಸಂವಿಧಾನಾತ್ಮಕ ರಕ್ಷಣೆಯಾಗಲೀ ಅಥವಾ ಸಂಖ್ಯಾಬಲವಾಗಲೀ ಇಲ್ಲದ ಜನಾಂಗಗಳ ಗತಿ ಅಧೋಗತಿ.

ಹಾಗಾದರೆ ಅವಕಾಶಗಳನ್ನು ಹೇಗೆ ಹಂಚಬೇಕು ? ಇಲ್ಲಿ ಮುಖ್ಯವಾಗಿ ಎರಡು ರೀತಿ ಅಭಿಪ್ರಾಯಗಳನ್ನು ಗುರುತಿಸಬಹುದು. ಒಂದು ವರ್ಗ, ಇದರಲ್ಲಿ ಮೇಲ್ಜಾತಿ ಮತ್ತು ಮೇಲ್ವರ್ಗದ ಜನ ಹೆಚ್ಚು, ಕೇವಲ ಅರ್ಹತೆಯಷ್ಟನ್ನೇ ಅವಕಾಶ ಹಂಚುವುದರ ಅಳತೆಗೋಲಾಗಿ ತೆಗೆದುಕೊಳ್ಳಬೇಕೆಂದು ವಾದಿಸುತ್ತದೆ. ಜಾತ್ಯಾತೀತ ರಾಷ್ಟ್ರದಲ್ಲಿ, ಇವರ ಪ್ರಕಾರ, ಜಾತಿ ಅವಕಾಶ ಹಂಚುವುದರ ಅಳತೆ ಗೋಲಾಗಲೇಬಾರದು. ಇದರಿಂದ ಜಾತಿ ಬೆಳೆಯುವುದೇ ಹೊರತು ನಾಶವಾಗುವುದಿಲ್ಲ. ಈ ವಾದ ಮೇಲ್ನೋಟಕ್ಕೆ ಯೋಗ್ಯವಾಗಿ ಕಂಡರೂ, ಈ ವರ್ಗ ಜಾತಿ ಆಧಾರದ ಮೇಲೆಯೇ ತಮ್ಮ ಜಾತಿಗಳು ಅನೇಕ ದಿನಗಳವರೆಗೆ ಅವಕಾಶಗಳ ಏಕಸ್ವಾಮ್ಯ ಹೊಂದಿದ್ದನ್ನು ಮತ್ತಿತರರನ್ನು ವಂಚಿತರನ್ನಾಗಿ ಮಾಡಿದ್ದನ್ನು ಮರೆತು ಬಿಡುತ್ತದೆ ಅನೇಕ ವರ್ಷಗಳಿಂದ ಆಸ್ತಿ ಮತ್ತು ವಿದ್ಯೆಯ ಏಕಸ್ವಾಮ್ಯ ಹೊಂದಿದ ಈ ಜನ ಹೆಚ್ಚು ಅರ್ಹರಾಗಿ ಕಾಣುತ್ತಾರೆ. ಅರ್ಹತೆ ಏನೆಂದು ನಿರ್ಧರಿಸುವ ಮತ್ತು ಅಳೆಯುವ ಜನ ಹೆಚ್ಚು ಕಮ್ಮಿ ಈ ಜಾತಿ

**ಜಿ. ಬಸವಣ್ಣಪ್ಪ**

ಯವರೇ ಆದ್ದರಿಂದ ಅರ್ಹತೆಯ ಪರೀಕ್ಷೆಯಲ್ಲಿ ಇವರಿಗೆ ಸಿಂಹಪಾಲು ದೊರೆಯುವ ಸಾಧ್ಯತೆಯಿದೆ. ಕೆಳಜಾತಿಯವರು ಅರ್ಹತೆಯ ಸ್ಪರ್ಧೆಯಲ್ಲಿ ಸದ್ಯಕ್ಕೆ ಇವರಿಗೆ ಸರಿಗಟ್ಟಲಾರರು. ಅರ್ಹತೆಯೊಂದೇ ಆಧಾರವಾದರೆ, ದೇಶದ ಶೇಕಡಾ 90 ರಷ್ಟು ಜನ ಪುನಃ ಅವಕಾಶಗಳಿಂದ ವಂಚಿತರಾಗುತ್ತಾರೆ.

ಈ ವರ್ಗ ಜಾತಿಯನ್ನು ಅಳತೆಗೋಲಾಗಿ ತೆಗೆದುಕೊಳ್ಳುವುದನ್ನು ವಿರೋಧಿಸಿದಷ್ಟೇ ತೀವ್ರವಾಗಿ ಆರ್ಥಿಕ ಅಳತೆಗೋಲನ್ನು ಅವಕಾಶಗಳ ಹಂಚಿಕೆಯಲ್ಲಿ ಅಳತೆಗೋಲಾಗಿ ತೆಗೆದುಕೊಳ್ಳುವುದನ್ನು ವಿರೋಧಿಸುವುದಿಲ್ಲ. ಎಲ್ಲಾ ಜಾತಿಯಲ್ಲೂ ಬಡವರಿದ್ದು, ಬಡವರಿಗೆ ವಿಶೇಷ ರೀತಿಯ ರಿಯಾಯಿತಿ ತೋರಿಸಬಹುದೆಂಬುದು ಇವರ ಅನಿಸಿಕೆ.

ಇನ್ನೊಂದು ವರ್ಗ ಅರ್ಹತೆಯನ್ನು ಕಡೆಗಣಿಸುವುದಿಲ್ಲ, ಆದರೆ ಅರ್ಹತೆ ಪಡೆಯಲು ಮತ್ತು ಪ್ರಕಟಿಸಲು ಬೇಕಾದ ಅವಕಾಶಗಳಿಂದ ಕೆಳಜಾತಿಯವರು ಅನೇಕ ದಿನಗಳವರೆಗೆ ವಂಚಿತರಾಗಿದ್ದರಿಂದ ಅರ್ಹತೆಯೊಂದೇ ಆಧಾರವಾದರೆ ತಮಗೆ ಅವಕಾಶಗಳು ಸಿಗುವುದಿಲ್ಲ ಎಂದು ವಾದಿಸುತ್ತದೆ. ಆದ್ದರಿಂದ ಜಾತಿವಾರು ಮೀಸಲಾತಿ ಮಾಡಿ ಅಲ್ಲಿ ಅರ್ಹರಿಗೆ ಅವಕಾಶ ಸಿಗಲಿ ಎಂಬುದು ಈ ವರ್ಗದ ಬಯಕೆ.

ಆರ್ಥಿಕ ಅಳತೆಗೋಲನ್ನು ಒಪ್ಪಲು ಈ ಜಾತಿಗಳಿಗೆ ಅಂಜಿಕೆ. ಅರ್ಹತೆ ಮತ್ತು ಆರ್ಥಿಕ ಕಾರಣಗಳಷ್ಟೇ ಅಳತೆಗೋಲಾದರೆ ಮೇಲ್ಜಾತಿಯವರು ಕೆಳಜಾತಿಯವರನ್ನು ಬಹುದೆಂಬ ಹೆದರಿಕೆ. ಅರ್ಹತೆ ಮತ್ತು ಅರ್ಥ ಹಿಂದುಳಿಯುವಿಕೆಯನ್ನು ನಿರ್ಧರಿಸುವ ಸ್ಥಾನದಲ್ಲಿರುವವರು ಹೆಚ್ಚಾಗಿ ಮೇಲ್ಜಾತಿಯವರೇ ಆದ್ದರಿಂದ, ಮೇಲ್ಜಾತಿಯವರೇ ಪುನಃ ಹೆಚ್ಚು ಪಾಲು ಪಡೆಯಬಹುದು ಎಂಬ ಇವರ ಭಯ ಬಹುಶಃ ಸಕಾರಣ. ಭಾರತೀಯ ಸಮಾಜದಲ್ಲಿ ವರ್ಗದಷ್ಟೇ ಮುಖ್ಯವಾಗಿ ಜಾತಿಯೂ ವ್ಯಕ್ತಿಯ ಸ್ಥಾನಮಾನ ನಿರ್ಧಾರದಲ್ಲಿ ಪಾತ್ರವಹಿಸುತ್ತದೆ. ಎರಡು ಭಿನ್ನ ಜಾತಿಯ ಸಮಾನ ವರ್ಗದ ವ್ಯಕ್ತಿಗಳು ಈ ದೇಶದಲ್ಲಿ ಸಮಾನರಲ್ಲ ಎಂದು ಯಾರೂ ಒಪ್ಪುತ್ತಾರೆ. ಅಸಮಾನತೆ ಉಳಿಸಿ ಬೆಳೆಸಲು ನೆರವಾದ ಜಾತಿ ಅದರ ವಿರುದ್ಧ ದಿಕ್ಕಿನಲ್ಲಿ ಅಂದರೆ ಸಮಾನತೆ/ತರುವ ಮೊದಲ ದಿನಗಳಲ್ಲಿ ಅವಕಾಶ ಹಂಚುವ ಅಳತೆ ಗೋಲುಗಳಲ್ಲಿ ಒಂದಾಗಿ ಕೆಲದಿನ ಮುಂದುವರೆಯುವುದು ತಪ್ಪಲ್ಲ. ಆದರೆ ಜಾತಿ ಅರ್ಹತೆಗಳಷ್ಟೇ ಅವಕಾಶ ಹಂಚುವಿಕೆಯ ಅಳತೆಗೋಲಾದರೆ ಎಲ್ಲಾ ಜಾತಿಗಳ ಬಡವರು ಅವಕಾಶಗಳಿಂದ ವಂಚಿತರಾಗುವುದು ಸತ್ಯ.

ಆದ್ದರಿಂದ 1) ಅರ್ಹತೆ 2) ಜಾತಿ 3) ಆರ್ಥಿಕ ಸ್ಥಿತಿ ಈ ಮೂರನ್ನು ಗಮನದಲ್ಲಿಟ್ಟುಕೊಳ್ಳಬೇಕಾದ ಅವಶ್ಯಕತೆ ಇದೆ. ಜಾತಿಯನ್ನು ಯಾವಾಗಲೂ ಅಳತೆಗೋಲಾಗಿ ಬಳಸುವುದು ಅಪೇಕ್ಷಣೀಯವಲ್ಲವಾದರೂ ಕನಿಷ್ಠ ಕೆಲವರ್ಷಗಳವರೆಗಾದರೂ ಜಾತಿ ಅಳತೆಗೋಲುಗಳಲ್ಲಿ ಒಂದಾಗಬೇಕು ನಂತರ ಕ್ರಮೇಣ ಇದಕ್ಕೆ ಕೊಡುವ ಪ್ರಾಮುಖ್ಯತೆಯನ್ನು ಇತರ ಕಾರಣಗಳಿಗೆ ಕೊಡಬಹುದು.

ಇದರ ಜೊತೆಗೆ ಅನಕ್ಷರಸ್ಥರೇ ಬಹು ಸಂಖ್ಯೆಯಲ್ಲಿರುವ ಈ ದೇಶದಲ್ಲಿ ಅನಕ್ಷರಸ್ಥ ತಂದೆ ತಾಯಿಗಳನ್ನು ಹೊಂದಿದ ಮಕ್ಕಳಿಗೆ ಸ್ವಲ್ಪ ಹೆಚ್ಚಿನ ಪ್ರಾಮುಖ್ಯತೆ ಕೊಡಬೇಕಾಗಿದ್ದು ನ್ಯಾಯ; ಯಾಕೆಂದರೆ ವಿದ್ಯಾವಂತ ತಂದೆ ತಾಯಿಗಳನ್ನು ಹೊಂದಿದ ಮಕ್ಕಳಿಗೆ ಅರ್ಹತೆ ಹೊಂದಲು ಮತ್ತು ಪ್ರಕಟಿಸಲು ಹೆಚ್ಚು ಅವಕಾಶಗಳಿವೆ. ಮೇಲಿನ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅವಕಾಶಗಳ ಹಂಚಿಕೆಗೆ ಅದಷ್ಟು ಜಾತ್ಯಾತೀತ ಹೊಸ ಸೂತ್ರವೊಂದನ್ನು ರೂಪಿಸುವ ಅಗತ್ಯವಿದೆ. ಅಂಥ ಸೂತ್ರವು ದುರ್ಬಲರನ್ನು ಯೋಗ್ಯರನ್ನು ಸಾಧ್ಯವಾದಷ್ಟು ಮಟ್ಟಿಗಾದರೂ ಕರಾರುವಾಕ್ಕಾಗಿ ಗುರುತಿಸುವಂತಿರಬೇಕು. ಅತ್ಯಂತ ಬಡ ಅವಿದ್ಯಾವಂತ ಬ್ರಾಹ್ಮಣನ ಅರ್ಹ ಮಗ ಅವಕಾಶದಿಂದ ವಂಚಿತನಾಗುವುದೂ, ಶ್ರೀಮಂತ ವಿದ್ಯಾವಂತ ಕೆಳಜಾತಿಯವನೊಬ್ಬನ ದಡ್ಡ ಮಗ ಜಾತಿಯೊಂದೇ ಕಾರಣ

...ವಕಾಶ ಪಡೆಯುವುದೂ ಸಮಂಜಸವಲ್ಲ. ಮತ್ತು ಕ್ರಮೇಣವಾಗಿಯಾದರೂ ಜಾತಿಯ ಪ್ರಭಾವ ಕಡಿಮೆಯಾಗಬೇಕು. ಆ ಬಗ್ಗೆ ಹೆಚ್ಚಿನ ಯೋಚನೆ ನಡೆಯಬೇಕಾದ ಅವಶ್ಯಕತೆ ಇದ್ದು ತಾತ್ಕಾಲಿಕವಾಗಿ ಮುಂದೆ ಸೂಚಿಸುವ ಸೂತ್ರವೊಂದನ್ನು ಗಮನಿಸಬಹುದು.

ಯಾವುದೇ ಅವಕಾಶಕ್ಕೆ ಇರುವ ಅಂಕಗಳು 100 ಎಂದು ಭಾವಿಸೋಣ. ಅವರಲ್ಲಿ ಅರ್ಹತೆಗೆ 50, ಆರ್ಥಿಕ ಕಾರಣಕ್ಕೆ 20, ಜಾತಿಗೆ 20 ಮತ್ತು ತಂದೆ ತಾಯಿಗಳ ವಿದ್ಯಾರ್ಹತೆಗೆ 10 ಅಂಕಗಳೆಂದು ಭಾವಿಸೋಣ. ಅರ್ಹತೆಯನ್ನು ನಿರ್ಧರಿಸುವ ಅಳತೆಗೋಲು ಪರೀಕ್ಷೆಯಲ್ಲಿ ಗಳಿಸಿದ ಅಂಕವಾದ್ದರಿಂದ, ಅಭ್ಯರ್ಥಿ ಅವಶ್ಯಕ ವಿದ್ಯಾರ್ಹತೆ ಪರೀಕ್ಷೆಯಲ್ಲಿಗಳಿಸಿದ ಶೇಕಡಾ ಅಂಕದ ಅರ್ಧ ಭಾಗವನ್ನು ಅಭ್ಯರ್ಥಿಯ ಅರ್ಹತೆಯ ಅಂಕಗಳೆಂದು ತೆಗೆದುಕೊಳ್ಳಬಹುದು.

ಉದಾ :

| ಗಳಿಸಿದ ಶೇಕಡಾ ಅಂಕಗಳು | ಅರ್ಹತೆಯ ಆಧಾರದ ಮೇಲೆ ಸಿಗುವ ಅಂಕಗಳು |
|---|---|
| 80 | 40 |
| 60 | 30 |
| 50 | 25 |
| 53 | 21.5 |

ಅಭ್ಯರ್ಥಿಯ ಆರ್ಥಿಕ ಸ್ಥಿತಿಯನ್ನು ಗುರುತಿಸಲು ಒಂದು ಸೂತ್ರವನ್ನು ರೂಪಿಸಬಹುದು 20,000 ರೂ.ಗಳಿಗಿಂತ ಹೆಚ್ಚು ಆದಾಯವಿರುವವರಿಗೆ ಕೊಡುವ ಅಂಕ ಶೂನ್ಯವಾಗಬೇಕು. ಉಳಿದ ಆದಾಯ ವರ್ಗಗಳನ್ನು 20 ಗುಂಪುಗಳನ್ನಾಗಿ ವಿಂಗಡಿಸಿ ಕಡಿಮೆ ಆದಾಯವಿರುವವರಿಗೆ ಹೆಚ್ಚು-ಹೆಚ್ಚು ಆದಾಯವಿರುವವರಿಗೆ ಕಡಿಮೆ ಅಂಕಗಳನ್ನು ಕೊಡಬೇಕು. ಉದಾ :

| ಆದಾಯ ವರ್ಗ | ಕೊಡುವ ಅಂಕಗಳು |
|---|---|
| 19,000—20,000 | 1 |
| 18,000—19,000 | 2 |
| 17,000—18,000 | 3 |
| 16,000—17,000 | 4 |
| ........ | ........ |
| 1,000— 2,000 | 19 |
| 000— 1,000 | 20 |

ದೇಶದ ಜನರನ್ನು ಜಾತಿಯ ಆಧಾರದ ಮೇಲೆ 20 ಗುಂಪುಗಳನ್ನಾಗಿ ಮಾಡಬಹುದು. ಅತ್ಯಂತ ಮೇಲು ಜಾತಿಗೆ ಜಾತಿಯ ಆಧಾರದ ಮೇಲೆ ಶೂನ್ಯ ಅಂಕವನ್ನು ಅತ್ಯಂತ ಕೆಳಜಾತಿಗೆ 20 ಅಂಕಗಳನ್ನು ಕೊಡುವುದು. ಜಾತಿಯ ಅಂತಸ್ತು ಹೆಚ್ಚಿದಂತೆ ಆ ಕಾರಣಕ್ಕಾಗಿ ಕೊಡುವ ಅಂಕವನ್ನು ಕಡಿಮೆ ಕೊಡುವುದು. ಮುಸ್ಲಿಂ ಮತ್ತು ಕ್ರಿಶ್ಚಿಯನ್ ಮೊದಲಾದ ಬೇರೆ ಧರ್ಮದವರಿಗೂ ಈ ಪಟ್ಟಿಯಲ್ಲಿ ಸ್ಥಾನ ಕೊಡಬಹುದು.

ತಂದೆ ತಾಯಿಗಳ ವಿದ್ಯಾಭ್ಯಾಸಕ್ಕೂ ಹೀಗೆಯೇ ಅಂಕ ಕೊಡಬಹುದು. ಅಭ್ಯರ್ಥಿಯ ತಂದೆ ತಾಯಿ ಡಾಕ್ಟರ್, ಇಂಜಿನಿಯರ್, ಲಾಯರ್ ಅಥವಾ ಸ್ನಾತಕೋತ್ತರರಾಗಿದ್ದರೆ ಆ ಕಾರಣಕ್ಕೆ ಕೊಡುವ ಅಂಕ ಶೂನ್ಯವಾಗಬೇಕು. ನಿರಕ್ಷರಸ್ಥರಾಗಿದ್ದರೆ ಅಭ್ಯರ್ಥಿಗೆ 10 ಅಂಕ ಕೊಡಬೇಕು. ಹೀಗೆ ವಿದ್ಯಾಭ್ಯಾಸ ಹೆಚ್ಚಿದಂತೆ ಕೊಡುವ ಅಂಕ ಕಡಿಮೆಯಾಗಬೇಕು. ಉದಾ :

| ತಂದೆ ತಾಯಿಗಳ ವಿದ್ಯಾಭ್ಯಾಸ | ಅಭ್ಯರ್ಥಿಗೆ ನೀಡಬಹುದಾದ ಅಂಕಗಳು |
|---|---|
| ಸ್ನಾತಕೋತ್ತರ | 0 |
| ಪದವಿ–ಸ್ನಾತಕೋತ್ತರ | 1 |
| ಪದವಿ | 2 |
| ಪದವಿ ಪೂರ್ವ | 3 |
| ಪಿ.ಯು.ಸಿ. | 4 |
| ಎಸ್.ಎಸ್.ಎಲ್.ಸಿ. | 5 |
| 8ನೇ ತರಗತಿ–ಎಸ್.ಎಸ್.ಎಲ್.ಸಿ. | 6 |
| 5 ರಿಂದ 7ನೇ ತರಗತಿ | 7 |
| 4ನೇ ತರಗತಿ | 8 |
| 1 ರಿಂದ 4ನೇ ತರಗತಿ | 9 |
| ನಿರಕ್ಷರಸ್ಥರು | 10 |

ಹೀಗೆ ಜಾತಿ, ವರ್ಗ ಮತ್ತು ಶಿಕ್ಷಣ ಎಲ್ಲಾ ಅಂಶಗಳನ್ನೂ ಗಮನದಲ್ಲಿಟ್ಟುಕೊಂಡು ಹಿಂದುಳಿದಿರುವಿಕೆಯನ್ನು ನಿರ್ಧರಿಸುವುದು ಮತ್ತು ಅವಕಾಶಗಳನ್ನು ಹಂಚುವುದು ಕಷ್ಟ ಮತ್ತು ಕ್ಲಿಷ್ಟಕರವಾಗಿ ತೋರಿದರೂ, ವಾಸ್ತವವಾಗಿ ಅಷ್ಟು ಕಷ್ಟದ ಕೆಲಸವೇನೂ ಆಗಲಾರದು. ಇದರಿಂದ (1)ಅವಶ್ಯಕ ವಿದ್ಯಾರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳನ್ನು ಮತ್ತು ಶೇಕಡಾವಾರನ್ನು ತಿಳಿಯುವುದು ಸುಲಭ. (2) ಜಾತಿಯ ಪಟ್ಟಿ ಮಾಡುವಾಗ ಎಲ್ಲರೂ ಕೆಳಗೆ ಹೋಗಲು ಇಷ್ಟಪಡಬಹುದಾದರೂ, ಹೆಚ್ಚೆಂದರೆ 1–2 ಸ್ಥಾನಗಳ ಅಂತರದಲ್ಲಿ ಜಾತಿಗಳ ಸ್ಥಾನವನ್ನು ನಿರ್ಧರಿಸಬಹುದು. ಜಾತಿಯೊಂದೇ ಅವಕಾಶ ಹಂಚಿಕೆಯ ಅಳತೆಗೋಲಾಗಿದ್ದರೆ ಪಟ್ಟಿಯಲ್ಲಿ ಕೆಳಗಿರಲು ಒತ್ತಡ ಹೆಚ್ಚುತ್ತಿತ್ತು. ಬೇರೆ ಅಂಶಗಳೂ ಇರುವುದರಿಂದ ಈಗ

## ಖೈದಿ ಸೋದರನೂ ಜೀತಗಾರ ದೇಶವೂ

ಸೋದರನೆ
ಇಲ್ಲಿ ಜಯದ ಗೇಟಿನ ಹತ್ತಿರ
ಕಂಡೆ ನಿನ್ನ ಹೆಸರು ಮತ್ತು ತ್ಯಾಗ
ಸ್ವತಂತ್ರ ತರಲು ಮತ್ತು
ಅದನ್ನ ಉಳಿಸಲು ಹಾಗೂ
ಪರಿಶುದ್ಧಗೊಳಿಸಲ್ಪಟ್ಟ ಸ್ವತಂತ್ರಕ್ಕಾಗಿ
ನೀನು ತಪಸ್ಸುಗೈದಿದೆ
ನಾವಿಲ್ಲಿ ಅದನ್ನು ಅನಾವರಣಗೊಳಿಸಿದ
ಕೇವಲ ಕೊಲೆಗಾರ
ಹೆಸರನ್ನು ಮಾತ್ರ ಗುರುತಿಸಿದ್ದೇವೆ
ಎಲ್ಲ ದುರ್ಮಾರ್ಗಗಳಿಂದ
ಅಧಿಕಾರ ಗ್ರಹಣಮಾಡಿದ
ಖೂಳರನ್ನು ಗೌರವಿಸಿದ್ದೇವೆ
ಸೋದರನೆ
ಕಾಲ್ಪನಿಕ ದಂತಕತೆಗಳ ಆಧಾರದ ಮೇಲಾದರು
ನಿನ್ನ ಜೀವನ ಚರಿತ್ರೆಯನ್ನು ಯಾರೂ ಬರೆಯಲಿಲ್ಲ
ನೀನೊಬ್ಬ ಉಡಾಳನಾಗಲಿ
ಅಥವಾ ಪ್ರವಾದಿಯಾಗಲಿ ಆಗಿರಲಿಲ್ಲ ;
ನೀನೊಬ್ಬ ಹಿಪ್ಪಿಯಾಗಲಿ
ಅಥವಾ ಉನ್ಮತ್ತ ವಿಷಯಲಂಪಟನಾಗಲಿ ಅಲ್ಲ
ಕಳ್ಳ, ಲೈಂಗಿಕ ದುರಾಚಾರ
ಇದಾವುದೂ ಅಲ್ಲದ ನೀನು
ಇದೆಲ್ಲವೂ ಆಗಿರುವ ನಮ್ಮ
ಜಾತಿವಾದಿ ನಾಯಕರಂತೆ ಅಲ್ಲ
ಒಂದು ಪದಕ–ಪ್ರಶಸ್ತಿ
ಕಿಂಚಿತ್ತು ಕೀರ್ತಿ, ಹೋಗಲಿ
ವಿಧೇಯ ಮಕ್ಕಳಿಂದ ತುಂಬಿದ ನಿನ್ನದೇ ಮನೆ
ಈ ನಮ್ಮ ಅಧಿಕಾರ ಪೀಡಿತ ಭ್ರಷ್ಟರಂತೆ ಅಲ್ಲದ
ನೀನು ಇದಾವುದನ್ನೂ ಪಡೆಯಲಿಲ್ಲ,
ಯಾಕೆಂದರೆ ನೀನು ಸತ್ಯ ಸಂಧತೆಯಿಂದ
ಬದುಕಲು ಪಣಕಟ್ಟಿ ಹೆಣಗಿರುವೆ.
ಅದರಿಂದಾಗಿ ಪ್ರಿಯ ಸೋದರನೆ
ನೀನು ಸೆರೆಮನೆಯ ಹೊರಗೆ
ಹಸಿವಿನಿಂದ ಅಲೆಯುತ್ತಿರುವೆ ಬತ್ತಲೆ
ಮತ್ತು ಒಳಗೆ
ಸುಂದರಲಾಲ್ S/o
ಕ್ರಿಷನ್‌ಲಾಲ್
ಖೈದಿ ನಂಬರ್ ಒಂದು

ಮೂಲ : ವಿದುಶ್
ಇಂಗ್ಲಿಷಿನಿಂದ ಕನ್ನಡಕ್ಕೆ :
ಮುಳ್ಳೂರು ನಾಗರಾಜು

ಹಾದಾಗುವುದಿಲ್ಲ; (3) ತಂದೆ ತಾಯಿಗಳ ವಿದ್ಯಾಭ್ಯಾಸವೂ ಸುಲಭವಾಗಿ ನಿರ್ಧಾರವಾಗುವ ಅಂಶ, (4) ಆದಾಯ ಪ್ರಮಾಣ ಪತ್ರಗಳನ ಕೊಡುತ್ತಿರುವ ಹಾಗೆಯೇ ಕೊಡಬಹುದಾಗಿದೆ. ಆದಾಯದ ಹೆಚ್ಚು ಕಡಿಮೆಯು ಸಲುವಾಗಿ ಈಗಿನಕ್ಕಿಂತ ಆದ ಒತ್ತಡ ಕಡಿಮೆಯಾಗುತ್ತದೆ.

ಕೆಳಗೆ ಈ ಕ್ರಮವನ್ನನುಸರಿಸಿ ಆಯ್ಕೆಯ ಪಟ್ಟಿಯನ್ನು ತಯಾರಿಸಲಾಗಿದೆ. ಜಾತಿಗಾಗಿ ಕೊಟ್ಟಿರುವ ಅಂಕಗಳು ಊಹಾತ್ಮಕ. ಬೇರೆ ಬೇರೆ ಜಾತಿ, ವಿವಿಧ ಅರ್ಹತೆ ಪಡೆದ ಅಭ್ಯರ್ಥಿಗಳು ಕೆಳಗಿನ ಪಟ್ಟಿಯಲ್ಲಿದ್ದಾರೆ.

| ಅಭ್ಯರ್ಥಿ | ಆವಶ್ಯಕ ವಿದ್ಯಾರ್ಹತೆ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು | ಜಾತಿ | ಆದಾಯ | ತಂದೆ-ತಾಯಿಗಳ ವಿದ್ಯಾಭ್ಯಾಸ | ಒಟ್ಟು ಅಂಕ 100ಕ್ಕೆ | ಆಯ್ಕೆಪಟ್ಟಿಯಲ್ಲಿ ಅಭ್ಯರ್ಥಿ ಸ್ಥಾನ |
|---|---|---|---|---|---|---|
| ಎ | 60 (30) | ಪಂಚಮ (20) | 15,000 (5) | ಇಲ್ಲ (10) | 65 | |
| ಬಿ | 70 (35) | ಬ್ರಾಹ್ಮಣ (0) | 10,000 (10) | ಬಿಎ (2) | 47 | |
| ಸಿ | 50 (25) | ಒಕ್ಕಲಿಗ (10) | 4,000 (16) | 4ನೇ ತರಗತಿ (8) | 59 | |
| ಡಿ | 48 (24) | ಪಂಚಮ (20) | 1,000 (19) | ಇಲ್ಲ (10) | 73 | |
| ಇ | 82 (41) | ಬ್ರಾಹ್ಮಣ (0) | 3,000 (19) | ಎಸ್‌ಎಸ್‌ಎಲ್‌ಸಿ (5) | 63 | |
| ಎಫ್ | 64 (32) | ಕುರುಬ (13) | 1.000 (1) | ಇಲ್ಲ (10) | 7[illegible] | |
| ಜಿ | 38 (19) | ವೈಶ್ಯ (5) | 59,000 (15) | 6ನೇ ತರಗತಿ (4) | 43 | |
| ಎಚ್ | 56 (28) | ದೋಬಿ (15) | 1.000 (19) | ಇಲ್ಲ (10) | 72 | |
| ಐ | 61 (30.5) | ಲಿಂಗಾಯಿತ (5) | 5,000 (15) | ಇಲ್ಲ (10) | 60.5 | |
| ಜೆ | 44 (22) | ಲಂಬಾಣಿ (18) | 1,000 (19) | ಇಲ್ಲ (10) | 69 | |
| ಕೆ | 46 (23) | ರೆಡ್ಡಿ (10) | 2,000 (18) | 8ನೇ ತರಗತಿ (7) | 58 | |
| ಎಲ್ | 35 (17.5) | ಕೊರಮ (20) | 1,000 (19) | ಇಲ್ಲ (10) | 66.5 | |
| ಎಂ | 50 (25) | ಕೊರಚ (20) | 1,000 (19) | ಇಲ್ಲ (10) | 74 | |
| ಎನ್ | 52 (26) | ಮುಸ್ಲಿಂ (10) | 1,000 (19) | ಇಲ್ಲ (10) | 64.5 | |

ಬ್ರಾಕೆಟ್ಟಿನಲ್ಲಿರುವುದು ಅಭ್ಯರ್ಥಿಗೆ ಆಯಾ ಕಾರಣಕ್ಕಾಗಿ ದೊರಕುವ ಅಂಕಗಳು. ಈ ಪದ್ಧತಿಯಲ್ಲಿ ಶೇಕಡಾ 50 ಅಥವಾ ಅದಕ್ಕಿಂತ ಕಡಿಮೆ ಸ್ಥಾನಗಳನ್ನು ಕೇವಲ ಅರ್ಹತೆಯ ಆಧಾರಕ್ಕೆ ಬಿಟ್ಟು ಉಳಿದ ಸ್ಥಾನಗಳಿಗೆ ಈ ಸೂತ್ರವನ್ನು ಅನುಸರಿಸಬಹುದು.

ಸೂಕ್ತ ಬದಲಾವಣೆಗಳೊಂದಿಗೆ ಈ ಸೂತ್ರ ವನ್ನು ರಾಜಕೀಯ ಮೀಸಲಾತಿಗೂ ಬಳಸಿದರೆ ಒಳ್ಳೆಯದು. ಕನಿಷ್ಟ 51 ರಷ್ಟು ಸ್ಥಾನಗಳನ್ನು ಈ ವರ್ಗದಲ್ಲಿ ಬರುವ ಅಭ್ಯರ್ಥಿಗಳಿಗೆ ಮೀಸಲಾಗಿಡಬೇಕು. ಇಂದಿನ ವಿಧಾನಸಭೆ, ಲೋಕ ಸಭೆಗಳು ಮೇಲ್ವರ್ಗ ಮತ್ತು ಮೇಲ್ಜಾತಿಯವರ ಸ್ವತ್ತುಗಳಾಗಿದ್ದು ಅಲ್ಲಿ ನಿಜವಾಗಿ ಬಡವರ ಮತ್ತು ಅಲ್ಪಸಂಖ್ಯಾತರ ಸಮಸ್ಯೆಗಳಿಗೆ ಪರಿಹಾರ ದೊರೆಯುವ ಸಾಧ್ಯತೆ ತೀರಾ ಕಮ್ಮಿ. ಮೇಲಿನ ಸೂತ್ರವನ್ನು ಅನ್ವಯಿಸಿದಲ್ಲಿ, ಬಹುತೇಕವಾಗಿ ಎಲ್ಲಾ ಜಾತಿ ವರ್ಗಗಳ ಪ್ರತಿನಿಧಿಗಳು ವಿಧಾನ ಸಭೆ, ಲೋಕ ಸಭೆಗಳಿಗೆ ಹೋಗಿ ಅವುಗಳು ಹೆಚ್ಚು ಪ್ರಾತಿನಿಧಿಕವಾಗಬಹುದು.

# ಸಾಮಾಜಿಕ ಪಿಡುಗಿನ ನಿವಾರಣೆ ಒಂದು ಸಾಮೂಹಿಕ ಹೊಣೆ

'ದೇವದಾಸಿ', 'ಬಾಲ್ಯವಿವಾಹ' ಹಾಗೂ 'ವರದಕ್ಷಿಣೆ' ಇವು ನಮ್ಮ ಸಮಾಜಕ್ಕೆ ಅಂಟಿಕೊಂಡು ಬಂದ ಭಯಂಕರ ಪಿಡುಗುಗಳು. ಇವುಗಳನ್ನು ತೊಡೆದು ಹಾಕುವುದು ಇಡೀ ಸಮಾಜದ ಹೊಣೆ.

○ ಹೆಣ್ಣು ಕುಲಕ್ಕೇ ಕಳಂಕ ಪ್ರಾಯವಾದ ದೇವದಾಸಿ ಪದ್ಧತಿಯನ್ನು ಪ್ರೋತ್ಸಾಹಿಸುವ ತಂದೆ-ತಾಯಿ, ಪಾಲಕರು, ಸಂಬಂಧಿಕರು ಅಥವಾ ಅದನ್ನು ಅನುಸರಿಸುವ, ಅನುಮತಿಸುವ ಇಲ್ಲವೇ ಒತ್ತಾಯಿಸುವವರು ಉಗ್ರ ಶಿಕ್ಷೆ ಮತ್ತು ಜುಲ್ಮಾನೆಗೆ ಗುರಿಯಾಗುತ್ತಾರೆ.

○ ಹೆಣ್ಣು ಹೆತ್ತವರ ಬಾಳಿನ ಭೀಕರ ಪ್ರಸಂಗವೆನಿಸಿದ ವರದಕ್ಷಿಣೆ ಕೇಳುವುದು, ಕೊಡುವುದು ಅಥವಾ ತೆಗೆದು ಕೊಳ್ಳುವುದು ಕಾನೂನುಬಾಹಿರ. ಈ ಅಪರಾಧವೆಸಗಿದವರು ಕಾನೂನಿನ ಪ್ರಕಾರ ಆರು ತಿಂಗಳ ಜೈಲು ಮತ್ತು ಐದು ಸಾವಿರ ರೂಪಾಯಿಗಳ ಜುಲ್ಮಾನೆಗೆ ಒಳಗಾಗುವರು.

○ ಬಾಳ ಬೆಳಗಿನಲ್ಲಿಯೇ ಬದುಕಿನ ನೊಗ ಹೇರುವ ಬಾಲ್ಯವಿವಾಹ ಮತ್ತೊಂದು ಸಾಮಾಜಿಕ ಸಮಸ್ಯೆ. ೨೧ ವರ್ಷ ವಯಸ್ಸಿನೊಳಗಿನ ಯುವಕರು ಅಪ್ರಾಪ್ತ ವಯಸ್ಸಿನ ಹೆಣ್ಣನ್ನು ಮದುವೆಯಾದರೆ ಒಂದು ಸಾವಿರ ರೂ. ದಂಡ ಮತ್ತು ೧೫ ದಿನ ಜೈಲು ವಾಸ ; ೨೧ ವರ್ಷ ವಯಸ್ಸು ಮೇಲ್ಪಟ್ಟ ಯುವಕರು ಅಪ್ರಾಪ್ತ ವಯಸ್ಸಿನ ಹೆಣ್ಣನ್ನು ಮದುವೆಯಾದಲ್ಲಿ ಮೂರು ತಿಂಗಳ ಜೈಲುವಾಸ ಮತ್ತು ನಿಗದಿಪಡಿಸಿದ ದಂಡವನ್ನು ತೆರಬೇಕಾಗುತ್ತದೆ.

○ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಮದುವೆ ಮಾಡುವುದು, ಮದುವೆಗೆ ಪ್ರೋತ್ಸಾಹಿಸುವುದು ಅಥವಾ ಪ್ರೇರೇಪಿಸಿದಲ್ಲಿ ಅಂತಹ ತಂದೆತಾಯರುಪೋಷಕರು ಬಂಧುಗಳು ಮೂರು ತಿಂಗಳ ಜೈಲುವಾಸ ಮತ್ತು ನಿಗದಿಪಡಿಸಿದ ದಂಡ ತೆರಬೇಕಾಗುತ್ತದೆ.

○ ಇಂತಹ ಪ್ರಸಂಗಗಳು ಗಮನಕ್ಕೆ ಬಂದಲ್ಲಿ ಹತ್ತಿರದ ಪೋಲೀಸ್ ಠಾಣೆಗೆ ತಿಳಿಸಿ, ಹೆಚ್ಚಿನ ಮಾಹಿತಿಗೆ ನಿರ್ದೇಶಕರು, ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ ಇಲಾಖೆ, ೩ನೇ ಮಹಡಿ, ಮಲ್ಟಿಸ್ಟೋರೀಡ್ ಬಿಲ್ಡಿಂಗ್, ಡಾ॥ ಬಿ. ಆರ್. ಅಂಬೇಡ್ಕರ್ ಬೀದಿ, ಬೆಂಗಳೂರು-೧ ಅಥವಾ ಜಿಲ್ಲಾ ಕೇಂದ್ರಗಳಲ್ಲಿರುವ ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರನ್ನು ಸಂಪರ್ಕಿಸಬೇಕು.

ಪ್ರಕಟಣೆ : ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು

# ಹುಡುಗಿ, ಪ್ರೀತಿ, ಮದುವೆ, ಜಾತಿ ವಿಚಾರವಂತರ ಯುದ್ಧಗಳು!

**ಹುಡುಗಿ, ಪ್ರೀತಿ, ಮದುವೆ, ಜಾತಿ, ಇವೆಲ್ಲವೂ ಇಂಡಿಯಾದಲ್ಲಿ ಒಬ್ಬ ವಿಚಾರವಂತ ಯುವಕ ಹಿಂಸೆಯಿಂದ ಎದುರಿಸಲೇಬೇಕಾದ ಯುದ್ಧಗಳೋ ಎಂಬಂತೆ ಕೆಲವು ಕ್ಷಣ ಭೀತಿಯನ್ನು ಹುಟ್ಟಿಸಿದವು.**

ಕೆ. ಎಸ್. ಕೇಶವ ಪ್ರಸಾದ್.

ಇವರಿಬ್ಬರೂ ನನ್ನ ಗೆಳೆಯರು. ಇಬ್ಬರೂ ಹಾಸನ ಜಿಲ್ಲೆಯ ಬರಹಗಾರರು ಮತ್ತು ವಿಚಾರವಾದಿಗಳು, ಒಬ್ಬನ ಹೆಸರು "ಎ" ಮತ್ತು ಇನ್ನೊಬ್ಬನ ಹೆಸರು "ಬಿ", ಜಾತೀಯತೆ, ಸಂಪ್ರದಾಯ ಮೂಢನಂಬಿಕೆಗಳನ್ನು ವಿರೋಧಿಸುವ ಇವರಿಬ್ಬರೂ ಎಡಪಂಥೀಯ ವಿಚಾರಗಳ ಬಗ್ಗೆ ತೀವ್ರ ಆಸಕ್ತಿಯುಳ್ಳವರು ಕೂಡಾ. ಇವರ ನಿಜವಾದ ಹೆಸರುಗಳನ್ನು ಬರೆದರೆ ಅವರ ಜೀವನಕ್ಕೆ ಒಂದಷ್ಟು ತೊಂದರೆಯಾಗಬಹುದೆಂಬ ಕಾರಣಕ್ಕಾಗಿ ಅವರ ಹೆಸರನ್ನು ಬರೆಯಲು ಇಷ್ಟಪಡುತ್ತಿಲ್ಲ.

"ಎ"ಗೆ28 ವರ್ಷಗಳಿರಬಹುದು. ಈತ ದೇವಾಂಗಶೆಟ್ಟರ ಜಾತಿಗೆ ಸೇರಿದವರು. ಕೆ. ಆರ್. ಪೇಟೆಯಲ್ಲಿ ಸರಕಾರಿ ಕೆಲಸದಲ್ಲಿದ್ದಾನೆ. ಇದ್ದಕ್ಕಿದ್ದಂತೆ ಒಂದು ದಿನ ಸಿಕ್ಕಿ ತಾನು ಒಕ್ಕಲಿಗರ ಹುಡುಗಿಯೊಂದನ್ನು ಪ್ರೇಮಿಸುತ್ತಿರುವುದಾಗಿಯೂ ಆಕೆಯ ಮನೆಯವರೆಲ್ಲಾ ತನುಮನದಿಂದ ಮದುವೆಗೆ ಒಪ್ಪಿರುವುದಾಗಿಯೂ ತಿಳಿಸಿದ್ದ. ನಂತರ ಒಂದು ದಿನ—ದಿನಾಂಕ 24 ರ ಮಾರ್ಚ್ 1984 ರಂದು ಕೆ. ಆರ್. ಪೇಟೆ ಬಳಿ ಹೇಮಗಿರಿಯ ಕಲ್ಯಾಣಮಂಟಪದಲ್ಲಿ ತನ್ನ ಮತ್ತು ಅವಳ "ಅಂತರ್ಜಾತೀಯ ಮದುವೆ" ನಡೆಯುತ್ತದೆಂದೂ ಮದುವೆ ನಂತರ "ಅಂತರ್ಜಾತಿ ಮದುವೆಗಳ"ಬಗ್ಗೆ ವಿಚಾರ ಸಂಕಿರಣವೊಂದು ಇದೆ ಅಂತಲೂ ಆತ ಪತ್ರ ಬರೆದಿದ್ದರಿಂದ ಮದುವೆಯ ಹಿಂದಿನ ದಿನ ಗೆಳೆಯ ಲಕ್ಷ್ಮೀಸಾಗರದ ಚಂದ್ರುವನ್ನೂ ಕರೆದುಕೊಂಡು ಹೊರಟೆ.

ಕೆ. ಆರ್. ಪೇಟೆಯ ಕಡೆ ಬಸ್ ಓಡುತ್ತಿದ್ದಾಗ ಮನಸ್ಸಿಗೆ ತುಂಬಾ ಸಂತೋಷವಾಗಿತ್ತು. ಮದುವೆ ಅಂತರ್ಜಾತಿಯ ಮತ್ತು ಸರಳ ಎಂಬ ಕಾರಣಕ್ಕಾಗಿ ಪುರೋಹಿತನಿಲ್ಲದೆ ಮದುವೆಯನ್ನು ಹುಡುಗಿಯ ಮನೆಯವರು ಅಂದರೆ ಶೂದ್ರರು ಎಷ್ಟರ ಮಟ್ಟಿಗೆ ಒಪ್ಪಿಕೊಳ್ಳುತ್ತಾರೆಂಬ ಕುತೂಹಲವೂ ಇತ್ತು.

ಕೆ. ಆರ್. ಪೇಟೆಯ ಕತ್ತಲಲ್ಲಿಳಿದು ಗೆಳೆಯ "ಎ' ವಾಸಮಾಡುವ ಕ್ವಾರ್ಟರ್ಸ್ ತಡಕಾಡಿದಾಗ ಅಲ್ಲಿ ಅವನು ಇತಲಿಲ್ಲ. ಜೂನಿಯರ್ ಇಂಜಿನಿಯರ್ ಆಗಿರುವ ಇನ್ನೊಬ್ಬ ಗೆಳೆಯ ವಸಂತ ಬಂದ. ನನ್ನನ್ನು "ಎ" ಇರುವಲ್ಲಿಗೆ ಕರೆದುಕೊಂಡುಹೋದ. ಅಂತರ್ಜಾತಿ ಮದುವೆಯಾಗಿರುವ ಡಾಕ್ಟರೊಬ್ಬರ ಮನೆಯಲ್ಲಿ ವಿಚಾರವಾದಿ ಗೆಳೆಯ "ಎ" ಕುಂಕುಮ ಅರಿಶಿಣಗಳಿಂದ ಶೋಭಿತನಾಗಿ, ಕುತ್ತಿಗೆಗೆ ಹೂಮಾಲೆ ಧರಿಸಿಕೊಂಡು ವಿರಾಜಮಾನನಾಗಿದ್ದನ್ನು ಕಂಡು ನಾನು ದಂಗಾದರೂ ತೋರಿಸಿಕೊಳ್ಳದೇ ಸಂತೋಷ ವ್ಯಕ್ತಪಡಿಸಿದೆ. ಪ್ರೀತಿ ಮತ್ತು ಸಂಕೋಚದಿಂದ ನನ್ನನ್ನು ಬರಮಾಡಿಕೊಂಡ "ಎ" ಏನೇನೋ ಮಾತಾಡಲು ಶುರುಮಾಡಿದ.

"ರಾತ್ರಿ ಊಟಕ್ಕೆ ಏನಪ್ಪಾ ಕಥೆ, ಎಲ್ಲಿ ಮಲಗೋದು" ಎಂಬುದೇ ನನ್ನ ತಲೆ ತುಂಬಿ ಅವನು ಹೇಳಿದ್ದಕ್ಕೆ ಯಾಂತ್ರಿಕವಾಗಿ 'ಹೂಂ' ಗುಡುತ್ತಾ ಇದ್ದಾಗಲಆತ ಕೆಲವರನ್ನು ಪರಿಚಯಿಸಿದ.ಡಾಕ್ಟರು, ಕಂಟ್ರಾಕ್ಟರು, ಇಂಜಿನಿಯರು, ಬ್ಯಾಂಕ್ ಮ್ಯಾನೇಜರು, ಕ್ಲರ್ಕ್ ಇತ್ಯಾದಿ ಹಲವು ಬಗೆಯ ಜನಗಳು. ನನ್ನ ಮುಖವನ್ನು ನೋಡುತ್ತಾ ನನ್ನನ್ನು ಸಂತೋಷಪಡಿಸಲೋ ಎಂಬಂತೆ ತನ್ನ ಕೈ ಬೆರಳಿನಲ್ಲಿ ಸನ್ನೆ ಮಾಡುತ್ತಾ "ಎ" ಹೇಳಿದ— "ನೋಡಿ ಗುರು. ನೀವು ಇದು ಹಾಕೋದಾದ್ರೆ ಇವ್ರಿಗೆ ಕಂಪ್ನಿ ಕೊಡಿ, ಇವ್ರೆಲ್ಲಾ ಮಟಡಾರಲ್ಲಿ ಹೇಮಗಿರಿಗೆ ಹೋಗ್ತಾರೆ ಈಗ" ಅಂದ. ನನಗೆ ಪುನರ್ಜನ್ಮ ಬಂದ ಹಾಗಾಯ್ತು. ಆ ಶಾಸ್ತ್ರಗೀಸ್ತ್ರಗಳನ್ನು ನೋಡುವುದರಿಂದಲಾದರೂ ಮುಕ್ತನಾಗಬಹುದಲ್ಲಾ ಎಂದು "ನಾನು ಹೋಗ್ತೀನಪ್ಪಾ ಸಧ್ಯ" ಅಂದೆ.

ಹೇಮಗಿರಿಯಲ್ಲಿರುವ ಕಲ್ಯಾಣಮಂಟಪವನ್ನು ಕತ್ತಲಲ್ಲಿ ನೋಡಿದಾಗ ಒಂದು ಮದುವೆ ಚಪ್ಪರ ಮತ್ತು ಒಂದು ಮುದುಕಿ ಯಾವುದೋ ಕೆಲಸದಲ್ಲಿ ನಿರತಳಾಗಿರುವುದನ್ನು ಬಿಟ್ಟರೆ ಅದ್ದೂರಿಯ ಮದುವೆ ನಡೆಯಬಹುದಾದ ಯಾವುದೇ ಕುರುಹುಗಳೂ ಇಲ್ಲದ್ದು ಕಂಡು ಕೊಂಚ ನೆಮ್ಮದಿಯಾಯ್ತು.

ಸುಮಾರು 10–12 ಜನರ ತಂಡ ಗುಂಡು ಹಾಕತೊಡಗಿತ್ತು. ಗುಂಡು ಹಾಕುವಾಗ "ಗುಂಡಮ್ಮ"ನ ಎದುರು ಜಾತಿಭೇದಗಳಿರುವುದಿಲ್ಲವೋ ಏನೋ, ಅಂತೂ ಆತನ ಲೋಟ ಇವನು, ಇವನ ಲೋಟ ಅವನೂ ಎಂಜಲು ಗಿಂಜಲು ಅನ್ನದೇ ಸುತ್ತಾಡತೊಡಗಿದ್ದವು. ಜತೆಗೆ ಹಿಂದೂಯಿಸಂ, ಸೋಷಲಿಸಂ, ಮಾರ್ಕ್ಸಿಸಂ, ಶಾವುಗಳು ರೈಲಲ್ಲಿ, ಬಸ್ಸಲ್ಲಿ, ಸಿನಿಮಾಥೇಟರುಗಳಲ್ಲಿ ನಡೆಸಿದ ಕಾಮಕೇಳಿಗಳು, ಕಾಮೂ, ಕಾಫ್ಕ, ಫ್ರಾಯ್ಡ್–ಗಳೆಲ್ಲಾ ಘಟನೆಗಳಾಗಿ, ಚಿತ್ರಗಳಾಗಿ ಗುಂಡಿನೆದುರು ಸುಳಿದಾಡಿ ಹೋದವು. ಸುಮಾರು ಅರ್ಧ ರಾತ್ರಿಯನ್ನೂ ಮೀರಿತ್ತು. ಬ್ರೆಡ್ ಮತ್ತು ಬಾಡು ಮುಗಿದುಹೋಗಿತ್ತು, ಚರ್ಚೆನಡೆದಾಗ ಯಾವ ದ್ವೇಷವಿತ್ತೋ ಏನೋ ಒಬ್ಬ ತಿಂದಿದ್ದನ್ನೆಲ್ಲಾ ಒಂದಿಬ್ಬರ ಮೇಲೆ ಕಕ್ಕಿದ. ಅವರು ಗಬರಾಡಿಕೊಂಡು ಎದ್ದು ಬಯ್ಯುತ್ತಾ ತೊಳೆದುಕೊಳ್ಳಲು ಹೋದರು.

ಬೆಳಿಗ್ಗೆ ಎದ್ದವನೇಚಂದ್ರುವನ್ನು ಕರೆದುಕೊಂಡು ನದಿ, ಗುಡ್ಡ, ಹೊಲಗದ್ದೆಗಳಲ್ಲಿ ಕಾಲ ಕಳೆದು ಮಧ್ಯಾಹ್ನ 12ಕ್ಕೆ ಮದುವೆ ಮಂಟಪಕ್ಕೆ ಬಂದೆ. ಮೈಕು ಯಾವುದೋ ಹಾಡನ್ನು ಅಬ್ಬರಿಸುತ್ತಿತ್ತು, ವಾದ್ಯದವರು ಬಡಿಯುತ್ತಿದ್ದರು. ಒಂದೆರಡು ಸರಕಾರಿ ಜೀಪುಗಳು ಜನರನ್ನು ಕರೆತಂದು ಬಿಡುತ್ತಿದ್ದವು. ಸುಮಾರು ಇನ್ನೂರು ಮುನ್ನೂರು ಜನರು ಸೇರಿದ್ದರು. ಯಾರಾದರೂ ಅಪ್ಪಟ ವಿಚಾರವಾದಿಗಳಿದ್ದಾರಾ ಎಂಬ ಆಸೆಯಿಂದ ಸಂದಿಗೊಂದಿಗಳನ್ನೆಲ್ಲಾ ಹುಡುಕಾಡುತ್ತಿದ್ದಾಗ ಗೆಳೆಯ "ಎ" ಮದುವೆ ಗಂಡಿನ ಎಲ್ಲಾ ಅಲಂಕಾರ ಪೋಷಾಕುಗಳೊಡನೆಸಜ್ಜಾಗಿ ಒಂದು ಕೋಣೆಯಲ್ಲಿ ಕುಳಿತಿ

... ಕಂಡೆ.

... ಗೆಳೆಯ ಯಾವುದಾದರೂ ನಾಟಕದ ಪಾತ್ರಧಾರಿಯಾಗಿರುವನೇ, ಅಥವಾ ಬೇರೆ ಯಾವುದೋ ವ್ಯಕ್ತಿಯ ದೇಹದೊಳಗೆ ಪರಕಾಯ ಪ್ರವೇಶ ಹೊಂದಿರುವನೋ ಎಂಬುದೇ ನನ್ನನ್ನು ಚಡಪಡಿಸುವಂತೆ ಮಾಡಿದ್ದಾಗ ಮದುವೆಯ ಕಾರ್ಯಕ್ರಮ ಪ್ರಾರಂಭವಾಯಿತು. ಒಬ್ಬ ಬ್ರಾಹ್ಮಣ ಪುರೋಹಿತ ಪಟಪಟನೆ ಮಂತ್ರ ಹೇಳತೊಡಗಿದ. ಗಂಡಿನ ಪಂಚೆಗೂ ಹೆಣ್ಣಿನ ಸೀರೆಗೂ ಗಂಟು ಬಿತ್ತು. ಪ್ರದಕ್ಷಿಣೆಯಾಯಿತು. ತಾಳಿ ಕಟ್ಟುವುದು, ಹಾರ ಹಾಕುವುದು ಇತ್ಯಾದಿ, ಇತ್ಯಾದಿ ನಡೆಯಿತು. ಮಾರ್ಕ್ಸ್, ಗಾಂಧಿ, ಫ್ರಾಯ್ಡ್, ಸಿನಿಮಾಥೇಟರು ರೈಲು ಬಸ್ಸಿನಲ್ಲಿ ಕಾಮಕ್ರೀಡೆಗಳು ಇತ್ಯಾದಿಗಳನ್ನು ಬಿಚ್ಚಿಟ್ಟಿದ್ದ ರಾತ್ರಿಗೆಳೆಯರು ಎಂತೆಂಥದೋ ಕೆಲಸಗಳಲ್ಲಿ ನಿರತರಾಗಿದ್ದರು. ಒಂದು ರೀತಿಯ ಅನಾಥ ಪ್ರಜ್ಞೆ ನನ್ನನ್ನು ಕಾಡತೊಡಗಿ ಬಹುದೂರದಲ್ಲಿ ಹೋಗಿ ನಿಂತೆ.

ಜಾತಿ ಪದ್ಧತಿ ವಿರುದ್ಧ ಪ್ರಾಕ್ಟಿಕಲ್ ಆಗಿ ನಿಜವಾದ ಸಮರಕ್ಕೆ ಈತ ಕಾಲಿಡುತ್ತಿದ್ದಾನೆ ಎಂದುಕೊಂಡಿದ್ದ ನನಗೆ ಕಂಡದ್ದು— ಮಂತ್ರಗಳನ್ನು ಪಠಿಸುವ ಬ್ರಾಹ್ಮಣನೊಬ್ಬನ ನಾಲಿಗೆಗೆ ತನ್ನ ಕೊರಳನ್ನು ತಗ್ಗಿಸಿದ್ದು ಮತ್ತು ಸಂಪ್ರದಾಯ ಮೂಢ ನಂಬಿಕೆಗಳನ್ನು ಕೈಯ್ಯಾರೆ ಅಪ್ಪಿಕೊಂಡಿದ್ದು.

ಸರಕಾರಿ ಕೆಲಸದಲ್ಲಿರುವ "ಎ" ಎಂಬ ಯುವಕನಿಗೆ ಆತ ಪ್ರೀತಿಸಿದ ಹುಡುಗಿಯನ್ನೇ ಕೊಟ್ಟು ಸಂಪ್ರದಾಯಗಳ ಪರದೆಯೊಳಗೆ ಅಪ್ಪಿ ಮುದ್ದಾಡುತ್ತಿರುವ ನಮ್ಮ ಶೂದ್ರರ ಸಮೂಹ "ಎ"ಯ ಸ್ಥಾನದಲ್ಲಿ ಒಬ್ಬ ಹೊಲೆಯನೋ, ಮಾದಿಗನೋ ಇದ್ದಿದ್ದರೆ ಏನು ಮಾಡುತ್ತಿತ್ತು, ಎಷ್ಟು ಅಪ್ಪಿ ಮುದ್ದಾಡುತ್ತಿತ್ತು, ಮತ್ತು ಯಾವ ಥರ ಮದುವೆ ಮಾಡುತ್ತಿತ್ತು ಎಂಬ ಪ್ರಶ್ನೆ ರೂಪು ಪಡೆದು ಮನಸ್ಸನ್ನೆಲ್ಲಾ ವ್ಯಾಪಿಸುತ್ತಿದ್ದಾಗ ಕೆಂಪು ಬಸ್ಸೊಂದು ಧೂಳೆಬ್ಬಿಸುತ್ತಾ ಬಂದು ನಿಂತಿತು. ಅದರೊಳಗಿಂದ ಮೂಳೆಗಳೇ ಇಳಿಯುತ್ತಿದೆಯೇನೋ ಎಂಬಂತೆ ಇನ್ನೊಬ್ಬ ವಿಚಾರವಾದಿ ಗೆಳೆಯ "ಬಿ" ಇಳಿದ.

"ಬಿ" ಲಿಂಗಾಯಿತರವನು. ಸುಮಾರು 15 ವರ್ಷಗಳ ಹಿಂದೆ ತನ್ನ ಜಾತಿಯಲ್ಲೇ ಮದುವೆಯಾದ ಹೆಣ್ಣನ್ನು ಯಾವುದೋ ಕಾರಣಕ್ಕಾಗಿ 6-7 ವರ್ಷಗಳ ಕೆಳಗೆ ಡೈವೋರ್ಸ್ ಮಾಡಿದ್ದ. ನಂತರ ತನ್ನ ಜಾತಿಯಲ್ಲೇ ಒಬ್ಬ ಹುಡುಗಿಯನ್ನು 6 ವರ್ಷದ ಹಿಂದೆ ಸರಳ ರೀತಿಯಲ್ಲಿ ಮದುವೆಯಾಗಿ ಪುಟ್ಟ ಸಂಸಾರ ನಡೆಸುತ್ತಿದ್ದಾನೆ. ಜೀವನದಲ್ಲಿ ಸಾಕಷ್ಟು ನೊಂದು ಬೆಂದವನು. ಈ ವಿಚಾರವಾದಿ ಮದುವೆಯ ಕಾರ್ಯಕ್ರಮಗಳನ್ನು ಒಂದು ಕ್ಷಣ ನೋಡಿ ಮುಖ ಕಿವುಚಿಕೊಂಡು ಆಚೆಗೆ ಬಂದ. ದೂರದಲ್ಲಿ ನಾನು ಕುಳಿತಿರುವುದನ್ನು ಯಾರೋ ಹೇಳಿದಾಗ ನನ್ನ ಬಳಿಗೆ ಬಂದ. ಸುಮಾರು ಒಂದು ಗಂಟೆಗಳ ಕಾಲ ಗೆಳೆಯ "ಎ" ಹಾಳಾಗಿ ಹೋದ ಬಗ್ಗೆ, ಮದುವೆಯ ಆಡಂಬರ, ಸಂಪ್ರದಾಯ, ಸರ್ಕಾರಿ ಜೀಪು—ಎಲ್ಲದರ ಬಗ್ಗೆ ವಿಮರ್ಶೆ ಟೀಕೆಗಳು ನಡೆದು ನಿಂತವು. ನಂತರ ಊಟ ಮಾಡುತ್ತಿರುವಾಗ ಆತ ಕೇಳಿದ "ನಿಮ್ಮ ಮದ್ವೆ ಯಾವಾಗ?"

"ಗೊತ್ತಿಲ್ಲ" ಎಂದೆ. ಯಾವ ಹುಡುಗಿ ಸಿಗುತ್ತಾಳೋ, ಎಂಥಹ ವಿಷಮ ಪರಿಸ್ಥಿತಿಗಳು ನನ್ನ ನಾಲಿಗೆಯ ಚೈತನ್ಯವನ್ನೇ ಕಸಿದುಬಿಡುತ್ತದೋ ಎಂಬುದೇ ಹೆದರಿಕೆಯಾಗತೊಡಗಿ ಆ ಯೋಚನೆಯನ್ನೇ ಬಿಟ್ಟೆ.

"ಇನ್ನೊಂದು ವಿಷ್ಯ ಗೊತ್ತಿಲ್ವ, ನಾನು ಈಗ ಅಜ್ಜ" ಎಂದ ಅವನು. ಸುಮಾರು 35-36 ವರ್ಷ ವಯಸ್ಸಿನ "ಬಿ" ಅಜ್ಜನಾಗಿದ್ದ. ಮೊದಲನೆಯ ಹೆಂಡತಿಯ 14 ವರ್ಷದ ಮಗಳಿಗೆ ಕಳೆದ ವರ್ಷ ಮದುವೆಯಾಗಿತ್ತು. ಕಳೆದ ತಿಂಗಳು ಆಕೆ ಮಗುವೊಂದನ್ನು ಹಡೆದಿದ್ದಳು. ನಾನು ಸಂತೋಷದಿಂದ ನಕ್ಕೆ.

ನಂತರ ಹೊಸ ದಂಪತಿಗಳ ಜತೆಯೇ ಕೆ. ಆರ್. ಪೇಟೆಗೆ ಬಂದು "ಎ" ವಾಸಿಸುವ ಮನೆ ಬಳಿ ಇಳಿದೆವು. ಹೆಣ್ಣು ಗಂಡಿನ ಮನೆ ಪ್ರವೇಶಿಸುವಾಗ ಬಲಗಾಲಿಟ್ಟು ಬರುವುದು, ತುಂಬಿದ ಸೇರನ್ನೊದೆಯುವುದು ಇತ್ಯಾದಿ ಶಾಸ್ತ್ರಗಳ ಸರಮಾಲೆ ಪ್ರಾರಂಭವಾಯಿತೇ ವಿನಃ ಯಾವುದೇ ವಿಚಾರ ಸಂಕಿರಣಗಳು ನಡೆಯಲಿಲ್ಲ. ನಾನು ತಡೆಯಲಾರದೆ ಅಲ್ಲಿಂದ ಜಾಗ ಖಾಲಿ ಮಾಡಿದೆ.

ಜೋರಾಗಿ ಮಾತಾಡಿದರೆ ಅದು ಯಾರಿಗಾದರೂ ತಾಗಿ ಪೆಟ್ಟಾಗುತ್ತದೇನೋ ಎಂಬಂತೆ ಕ್ಷೀಣ ಧ್ವನಿಯಲ್ಲಿ ಮಾತಾಡುವ "ಬಿ" ಬಸ್‌ನಿಲ್ದಾಣದಲ್ಲಿ ಏನೇನೋ ಹರಟುತ್ತಿದ್ದವನು ಇದ್ದಕ್ಕಿದಂತೆಯೇ ನೊಂದ ಧ್ವನಿಯಲ್ಲಿ ಹೇಳಿದ— "ನನ್ ಮಿಸೆಸ್ ಸರಿ ಇಲ್ಲ, ಇತ್ತೀಚ್ಗೆ, ಹೇಳಿದ್ ಮಾತು ಚೂರೂ ಕೇಳ್ತಾ ಇಲ್ಲಾ, ಸಿಕ್ಕಾಬಟ್ಟೆ ಹಠ ಹಿಡೀತಾಳ್ರೀ"

ಗಾಬರಿಯಾದರೂ ನಾನು ತೋರಿಸಿಕೊಳ್ಳದೆ "ಯಾಕೆ" ಎಂದೆ. ಆತ ಮೌನವಾಗಿದ್ದ. ಆತನ ಆಲೋಚನೆ ಮತ್ತು ಅವಳ ಆಲೋಚನೆ ನಡುವೆ ಕಂದಕ ಏರ್ಪಟ್ಟಿದ್ದನ್ನು ನಾನು ಯಾವಾಗಲೋ ಗುರುತಿಸಿದ್ದೆ. ಈಗ ನನ್ನ ಕಣ್ಣೆದುರೇ ನಿಂತಿದ್ದ ಅವನ ದೇಹವನ್ನ ಮತ್ತು ಆತನಿಗೆ ಬರುವ ಸಂಬಳ, ಅವನ ಹೆಂಡತಿಯ ಆಸೆಗಳು ಮತ್ತು ಬೇಡಿಕೆಗಳು ಇತ್ಯಾದಿ ಲೆಕ್ಕ ಹಾಕಿ ನಾನು ಅವನ ಲೈಂಗಿಕ ವೀಕ್ನೆಸ್ ಮತ್ತು ಬಡತನ ಕಾರಣಗಳಿರಬಹುದೆಂದು ಊಹಿಸತೊಡಗಿದೆ. ಆ ಊಹೆ ನಿಜವೆಂಬಂತೆ ಆತನ ವರ್ತನೆ ಮತ್ತು ಮಾತೂ ಪ್ರಕಟಗೊಳ್ಳುತ್ತಿದ್ದವು'

"ನೋಡಿ, ಯಾರಾದ್ರು ಫ್ರೆಂಡ್‌ಗಳನ್ನು ಕರ್ಕೊಂಡೋದ್ರೆ-ಇವ್ರಗೆ ಅಡಿಗೆ ಮಾಡಿಹಾಕೋಕಾ ನಾನ್ ಇರೋದು' ಅಂತಾಳೆ – ಥೂ ನಂಗಂತೂ ಸಾಕಾಗಿಹೋಗಿದೇರಿ. ಜೀವ್ನಾನೇ ಬೇಸ್ರ ಆಗಿದೆ' ನಿಟ್ಟುಸಿರುಬಿಟ್ಟ.

ಅವನು ದಲಿತ ಸಂಘರ್ಷ ಸಮಿತಿಯ ಗೆಳೆಯರನ್ನು ಮನೆಗೆ ಕರೆದುಕೊಂಡು ಹೋದಾಗ ಅವಳ ಸಹನೆ ಕೆಣಕುತ್ತಿತ್ತು. ಅವಳು ಸ್ವಜಾತಿ ಮತ್ತು ಬಾಂಧವರನ್ನು ಪ್ರೀತಿಸುವಂತೆ ಗಂಡನ ಸ್ನೇಹಿತರನ್ನು ಪ್ರೀತಿಸುತ್ತಿರಲಿಲ್ಲ. ಇವನು ಅವಳ ವಿಚಾರಗಳನ್ನು ಬದಲಿಸಲು ಪ್ರಯತ್ನಿಸಿ ಸೋತಿದ್ದ.

ಅಷ್ಟರಲ್ಲಿ ಬಸ್ ಬಂದಿದ್ದರಿಂದ ನಮ್ಮ ಸಂವಾದ ಕಟ್ ಆಯಿತು. ನಾನು ಮೈಸೂರಿನ ಕಡೆಗೂ ಆತ ಹಾಸನದ ಕಡೆಗೂ ಹೊರಟೆವು.

ಭರವಸೆ ಹುಟ್ಟಿಸಬಲ್ಲ ಗೆಳೆಯನಾಗಿದ್ದ "ಎ" ತನ್ನ ಸ್ವತಂತ್ರ ವಿಚಾರಗಳನ್ನು, ವ್ಯಕ್ತಿಸ್ವಾತಂತ್ರ್ಯವನ್ನು ಮಾರಿಕೊಂಡಿದ್ದ, ಒಂದು ಕಾಲದಲ್ಲಿ ಜಾತಿವಾದಿಯಾಗಿದ್ದ "ಬಿ" ಎಲ್ಲವನ್ನೂ ಬಿಟ್ಟು ಮನುಷ್ಯನಾಗಲು ತುಂಬಾ ಯತ್ನಿಸುತ್ತಿದ್ದ.

ಬದುಕನ್ನು ಪ್ರಯಾಣ ಎಂದು ನಂಬಿಕೊಳ್ಳುತ್ತಾ ಬಂದ ನನಗೆ ಈ ಗಂಡು ಹೆಣ್ಣುಗಳು, ಲೈಂಗಿಕತೆ, ಕುಡಿತ ಮಾತು ಎಲ್ಲವೂ ಈ ಒಂದು ದಿವದಲ್ಲಿ ಎಷ್ಟು ಕೃತಕವಾಗಿ ಕಂಡವು ಎಂದರೆ ಜಾತಿ ಮತ್ತು ಮದುವೆಯಂತಹ ಕೃತಕ ಸಂಗತಿಗಳನ್ನು ಮೀರಲಾರದಷ್ಟು. ಗಂಡ-ಹೆಂಡತಿಯ ಪ್ರೀತಿ ಪ್ರೇಮಗಳು ನಿಜವಾಗಿ ಲೈಂಗಿಕತೆ ಮತ್ತು ಹಣಕಾಸಿನ ಸಂಬಂಧಗಳ ಮೇಲೆ ಮಾತ್ರ ನಿಲ್ಲುತ್ತಾ ಹೋದರೆ ಇಡೀ ಜೀವನ ಎಷ್ಟು ಕೃತಕವಾಗಬಹುದೆಂದರೆ ಸೂಳೆ ಮತ್ತು ವಿಟನ ಪ್ರೀತಿ-ಪ್ರೇಮಗಳನ್ನು ಮೀರಲಾರದಷ್ಟು—ಎಂದು ಅನ್ನಿಸತೊಡಗಿತು.

ಮುಸ್ಸಂಜೆಯ ಸೂರ್ಯ ಕೆಂಪಾಗಿ ಮುಳುಗುತ್ತಿದ್ದಾಗ ನಿಶ್ಚಿಂತೆಯಿಂದ ಬಸ್ಸು ಓಡುತ್ತಿತ್ತು. ಹುಡುಗಿ, ಪ್ರೀತಿ, ಪ್ರೇಮ, ಮದುವೆ, ಜಾತಿ ಇವೆಲ್ಲವೂ ಇಂಡಿಯಾದಲ್ಲಿ ಒಬ್ಬ ವಿಚಾರವಂತ ಯುವಕ ಹಿಂಸೆಯಿಂದ ಎದುರಿಸಲೇಬೇಕಾದ ಯುದ್ಧಗಳೋ ಎಂಬಂತೆ ಕೆಲವು ಕ್ಷಣ ಭೀತಿಯನ್ನು ಹುಟ್ಟಿಸಿದವು.

● ● ●

# ರಾಜಕೀಯ ದಾಳಗಳಾದ ಭೂನ್ಯಾಯ ಮಂ. ಸದಸ್ಯ

(ಕಳೆದ ಸಂಚಿಕೆಯಿಂದ)

**ಅನ್ಯಾಯಕ್ಕೆ ಬೆನ್ನು ಹತ್ತಿದ ಲಾಯರುಗಳು:**

1974 ರ ತಿದ್ದುಪಡಿಯ ನಂತರ ಎಲ್ಲಾ ಕೇಸುಗಳನ್ನು ಭೂನ್ಯಾಯ ಮಂಡಳಿಗೆ ವರ್ಗಾಯಿಸಲಾಯಿತು. ಹೀಗಾಗಿ ಸಿವಿಲ್ ಕೋರ್ಟುಗಳಿ, ವಕೀಲರಾಗಲಿ ಇದರ ಮಧ್ಯ ಪ್ರವೇಶಿಸುವುದನ್ನು ತಪ್ಪಿಸಲಾಯಿತು. ಆದರೆ ವಕೀಲರುಗಳು 1974ರ ಮೊದಲು ಭೂಮಿಗೆ ಸಂಬಂಧ ಪಟ್ಟ ಕೆಲವು ಕೇಸುಗಳನ್ನು ನಡೆಸುತ್ತಿದ್ದರು.ಇಂಥ ಕೇಸುಗಳನ್ನು ನಡೆಸುತ್ತಿದ್ದ ಹಲವಾರು ವಕೀಲರು ಟ್ರಿಬುನಲ್ ಸದಸ್ಯರಾದರು. ಹೀಗೆ ಸದಸ್ಯರಾದ ವಕೀಲರು ತಾವು ವಾದಿಸಬೇಕಾಗಿದ್ದ ಕೇಸುಗಳ ಬಗ್ಗೆ ತೀರ್ಮಾನ ಕೊಡುವ ಅಧಿಕಾರಿ ಇವರೇ ಆದಾಗ ಅವರು ಎಷ್ಟು ಮಟ್ಟಿಗೆ ನಿಷ್ಪಕ್ಷಪಾತವಾಗಿ ತೀರ್ಮಾನ ಕೊಡಬಲ್ಲರು ಹಾಗೂ ಗೇಣಿದಾರನಿಗೆ ಪರಿಹಾರ ನ್ಯಾಯ ಸಿಕ್ಕಲು ಸಾಧ್ಯವೆ?ಎನ್ನುವ ಪ್ರಶ್ನೆಗಳಿವೆ. ಅಲ್ಲದೆ ಸಾಮಾನ್ಯವಾಗಿ ಇವರು ನಿರ್ವಹಿಸುತ್ತಿದ್ದ ಕೇಸುಗಳು ಭೂಮಾಲೀಕರವು. ಆದ್ದರಿಂದ ಇವರು ಗೇಣಿದಾರರಿಗೆ ನ್ಯಾಯ ದೊರಕಿಸಿ ಕೊಡುವುದು ಅನುಮಾನಾಸ್ಪದ. 29ನೇ ಆಗಸ್ಟ್ 1974 ರ ಶಾಸನ ಸಭೆಯಲ್ಲಿ ಎಚ್.ಡಿ ದೇವೇಗೌಡರು, ಆಗ ಭೂಕಂದಾಯ ಸಚಿವರಾಗಿದ್ದ ಹುಚ್ಚಮಾಸ್ತಿ ಗೌಡರನ್ನು ಈ ಬಗ್ಗೆ ಹೀಗೆ ಪ್ರಶ್ನಿಸಿದ್ದಾರೆ. "ಕೆಲವು ಲಾಯರ್ಸ್ ಟ್ರಿಬುನಲ್‌ನಲ್ಲಿದ್ದಾರೆ ಅವರು ಹಿಂದೆ ಕೆಲವು ಕೇಸುಗಳನ್ನು ಕೋರ್ಟುಗಳಲ್ಲೆ ನಡೆಸಿದ್ದಾರೆ. ಇನ್ನೂ ಕೆಲವು ಕೇಸ್ಸುಗಳನ್ನು ನಡೆಸುತ್ತಿದ್ದಾರೆ. ಅವರು ಈಗಾಗಲೇ ಕಕ್ಷಿಗಾರರ ಪರವಾಗಿ ಕೋರ್ಟುಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅಂತಹವರು ಆದರಲ್ಲಿದ್ದರೆ ಟ್ರಬುನಲ್‌ನಲ್ಲಿ ಕೆಲಸಮಾಡುವಾಗ ನಿಷ್ಪಕ್ಷಪಾತವಾಗಿ ಕೆಲಸ ಮಾಡುವುದಕ್ಕಾಗುತ್ತವೆಯೆ?.7 ಈ ಪ್ರಶ್ನೆಗೆ ಸಚಿವರು ಹಾರಿಕೆಯ ಉತ್ತರ ಕೊಟ್ಟು ಸುಮ್ಮನಾದರು. ಅಂತಹ ಲಾಯರುಗಳು ಟ್ರಿಬುನಲ್ ಸದಸ್ಯರಾಗಬಾರದು. ಅನ್ನುವ ತೀರ್ಮಾನ ತೆಗೆದುಕೊಂಡಿದ್ದರೆ ಕೆಲವು ಗೇಣಿದಾರರಿಗೆ ಸ್ವಲ್ಪ ಮಟ್ಟಿಗೆ ನ್ಯಾಯ ಸಿಕ್ಕುತ್ತಿತ್ತೇನೊ.

ವಿಪರ್ಯಾಸವೆಂದರೆ ಕಾನೂನಿನ ಅರಿವಿಲ್ಲದ ಸದಸ್ಯರು ಆ ಕಾರಣಕ್ಕಾಗಿ ತಪ್ಪು ತೀರ್ಮಾನಗಳನ್ನು ತೆಗೆದುಕೊಂಡರೆ ಕಾನೂನು ಗೊತ್ತಿರುವ ಲಾಯರ್ ಸದಸ್ಯರುಗಳು ತಮ್ಮ ಹಿಂದಿನ ಕೇಸ್ಸುಗಳು ಇಲ್ಲೆ ಮುಂದುವರಿದಿದ್ದುದರಿಂದ ತಮ್ಮ ಸ್ವಾರ್ಥಕ್ಕಾಗಿ ಅನ್ಯಾಯದ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಾರೆ. ಆದ್ದರಿಂದ ಕಾನೂನು ಗೊತ್ತಿಲ್ಲದ ಸದಸ್ಯರೂ ಕಾನೂನು ಗೊತ್ತಿರುವ ಲಾಯರ್ ಸದಸ್ಯರೂ ಗುಣಮಟ್ಟದಲ್ಲಿ ಒಂದೇ ಆಗಿರುತ್ತಾರೆ.

ಬಹಳಷ್ಟು ಮಂದಿ ಸದಸ್ಯರಿಗೆ ಕಾನೂನಿನ ಪರಿಜ್ಞಾನವಿಲ್ಲ ಎಂದು ಗುರುತಿಸಿದ ಆನಂದ ಅವರು ಸುಧಾ ಪತ್ರಿಕೆಯಲ್ಲಿ ಕಾಂಗ್ರೆ ಸದಸ್ಯರೊಬ್ಬರು ಹೇಳಿದ ಮಾತನ್ನು ಉದಾಹರಿಸುತ್ತಾರೆ, "ನಂಜನಗೂಡಿನ ಟ್ರಿಬುನಲ್‌ನಲ್ಲಿರುವ ಸದಸ್ಯರಿಗೆ ಕಾನೂನಿನ ಜ್ಞಾನವಿಲ್ಲ ಸಾಕ್ಷಿಗಳನ್ನು ಪಾಟಿಸವಾಲು ಮಾಡಿ ಬಯಲಿಗೆಳೆಯುವ ತಾಕತ್ತೂ ಇಲ್ಲ ನ್ಯಾಯದ ಗೆರೆ ದಾಟುವುದಿಲ್ಲ ಎಂಬ ನಿಷ್ಠೆ ಇಲ್ಲ. ಮಾಜಿ ಕಾಂಗ್ರೆ ಶಾಸಕರೊಬ್ಬರು ಈ ಸದಸ್ಯರಲ್ಲಿ ಯಾರಾದರೊಬ್ಬರು ಭೂಸುಧಾರಣಾ ಕಾನೂನಿನ ಒಂದು ನಕ್ಷೆ ವಿವರಿಸಲಿ ನೋಡೋಣ ಅಂದೇ ನಾನು ರಾಜಕೀಯದಿಂದ ನಿವೃತ್ತಿ ಹೊಂದುತ್ತೇನೆ ಎಂದು ಸವಾಲೆಸೆಯುತ್ತಾರೆ.8

**ಭೂ ಸುಧಾರಣಾ ಚರಿತ್ರೆ 11**

● ಕ್ಷೀರ ಸಾಗರ

ಟ್ರಿಬುನಲ್‌ಗಳು ಬಹಳ ಮಂದಗತಿಯಿಂದ ಕಾರ್ಯ ನಿರ್ವಹಿಸುತ್ತಿವೆ. ಎಂದು ಬಹಳ ಮಂದಿ ದೂರಿದ್ದಾರೆ. ಕೇಸಿಗೆ ಸಂಬಂದಪಟ್ಟ ವಾದಿ ಪ್ರತಿವಾದಿ ಎರಡೂ ಕಡೆಯವರು ನೂರಾರು ಬಾರಿ ಓಡಾಡಿದ್ದಾರೆ ವರ್ಷಾನುಗಟ್ಟಲೆ ಕೇಸುಗಳನ್ನು ನಡೆಸಿದ್ದಾರೆ. 1975 ರಲ್ಲಿ ದಾಖಲಾದ ಕೇಸುಗಳು 1981 ರ ನವೆಂಬರಿನಲ್ಲಿ ಮುಗಿದಿವೆ. ಯಾಕೆಂದರೆ ಟ್ರಿಬುನಲ್‌ಗಳು ಕಾರ್ಯ ನಿರ್ವಹಿಸುತ್ತಿದ್ದುದೇ ನಿಧಾನಗತಿಯಿಂದ. ಇವು ತಿಂಗಳಿಗೆ 3-4 ಬಾರಿ ಮಾತ್ರ ಕಾರ್ಯ ನಿರ್ವಹಿಸುತ್ತಿದ್ದವು. ಆದರಲ್ಲೂ ಆಡಳಿತ ಪಕ್ಷದಲ್ಲಿ ಸ್ವಲ್ಪ ಬದಲಾವಣೆ ಯಾದರೂ ಇಲ್ಲಿಯ ಸದಸ್ಯರನ್ನು ಬದಲಾಯಿಸುವ ಸಾಧ್ಯತೆ ಇದ್ದುದರಿಂದ ತಮ್ಮ ಸ್ಥಾನ ಉಳಿಸಿಕೊಳ್ಳಲು ತಮ್ಮ ಪಕ್ಷದ ಕಛೇರಿಗೆ ಮಂತ್ರಿಗಳಿಗೆ ಎಡತಾಕುವುದೇ ಮುಖ್ಯವಾಗಿತ್ತು. ಅಂಥ ಸಮಯಗಳಲ್ಲಿ ಟ್ರಿಬುನಲ್‌ಗಳು ವಾರಗಟ್ಟಲೆ ಸ್ಥಗಿತಗೊಳ್ಳುತ್ತಿದ್ದವು. ಅರ್ಜಿದಾರನ ದೃಷ್ಟಿಯಲ್ಲಿ ನಿಧಾನಗತಿ ಒಂದು ಶಾಪವಾದರೆ, ಶರವೇಗದ ತೀರ್ಮಾನಗಳೂ ಇನ್ನೊಂದು ದುರಂತವಾಗಿ ಪರಿಣಮಿಸಿತು. (ಕರ್ನಾಟಕದ ರಜತ ಮಹೋತ್ಸವದ ಆಚರಣೆಯೊಳಗೆ ಸರ್ಕಾರ ತನ್ನ ಮಹತ್ಸಾಧನೆಯನ್ನು ತೋರಿಸುವ ಅಂಗವಾಗಿ 1981 ರ ನವಂಬರ್ ಒಂದನೇ ತಾರೀಖಿನ ಒಳಗೆ ಎಲ್ಲಾ ವ್ಯಾಜ್ಯಗಳನ್ನೂ ಪರಿಹರಿಸಬೇಕೆಂದು ಟ್ರಿಬುನಲ್‌ಗೆ ಆದೇಶ ನೀಡಿತು.' ಈ ಕಾರಣಕ್ಕಾಗಿ ಬಹಳಷ್ಟು ಟ್ರಿಬುನಲ್‌ಗಳು ಹಿಂದೆ ತಿಂಗಳಿಗೆ 3-4 ಬಾರಿ ಸೇರಿ ದಿನ ಒಂದಕ್ಕೆ 5-6 ಕೇಸುಗಳನ್ನು ತೀರ್ಮಾನಿಸುತ್ತಿದ್ದರು. ಈಗ ದಿನಕ್ಕೆ 30 ರಿಂದ 70 ಕೇಸುಗಳನ್ನು ಪರಾತುರಿಯಲ್ಲಿ ಮುಗಿಸಲು ಪ್ರಾರಂಭಿಸಿದರು.10 ಈ ಆತುರದಲ್ಲಿ ನಿಜವಾದ ಗೇಣಿದಾರನಿಗೆ ಭೂಮಿ ಸಿಕ್ಕುತ್ತದೋ ಇಲ್ಲವೋ ಅನ್ನುವುದಕ್ಕಿಂತ ಕೇಸುಗಳನ್ನು ಮುಗಿಸುವುದೇ ಮುಖ್ಯ ಉದ್ದೇಶವಾಯಿತು. ಈ ಸಂದರ್ಭದಲ್ಲಿ ಸದಸ್ಯರ ಕೈಬೆಚ್ಚಗೆ ಮಾಡಿದ ಭೂಮಾಲೀಕರು ಇದರ ಲಾಭವನ್ನು ಚೆನ್ನಾಗಿಯೇ ಗಿಟ್ಟಿಸಿಕೊಂಡರು. ಈ ಕಾರಣಕ್ಕಾಗಿಯೇ ತೀರ್ಮಾನವಾದ ಕೇಸುಗಳಲ್ಲಿ ಶೇಕಡಾ 50 ಭಾಗ ಭೂಮಾಲೀಕರು ತಮ್ಮ ಜಮೀನುಗಳು ಕೈ ತಪ್ಪಿ ಹೋಗದಂತೆ ಉಳಿಸಿಕೊಂಡರು. ಬಡಗೇಣಿದಾರರು ಮಾತ್ರ ಮೋಸಕ್ಕೆ ಒಳಗಾಗ ಬೇಕಾಯಿತು.

**ರಾಜಕೀಯ ದಾಳಗಳಾದ ಸದಸ್ಯರು :**

"ಆಡಳಿತ ಪಕ್ಷದಲ್ಲಿ ನಡೆಯುವ ಏಳು ಬೀಳುಗಳು ಹೇಗೆ ಟ್ರಿಬುನಲ್ ಸದಸ್ಯರನ್ನು ದಾಳ ಆಡಿಸುತ್ತವೆ ಅನ್ನುವುದಕ್ಕೆ ಲಲಿತ ನಟರಾಜ್‌ರವರ ಲೇಖನ ಕನ್ನಡಿ ಹಿಡಿಯುತ್ತದೆ. ಅವರ ಲೇಖನದ ಮುಖ್ಯಾಂಶಗಳನ್ನು ಇಲ್ಲಿ ಬರೆಯುವುದು ಸೂಕ್ತ ಎನ್ನಿಸುತ್ತದೆ," ಆಡಳಿತದಲ್ಲಿರುವ ರಾಜಕೀಯ ಪಕ್ಷ ಬಲಗೊಳ್ಳುವುದಕ್ಕೆ ಭೂನ್ಯಾಯ ಮಂಡಳಿಯ ಸದಸ್ಯತ್ವ ಬಲವಾದ ಬೆನ್ನೆಲುಬಾಗುತ್ತದೆ. ಆಡಳಿತ ಪಕ್ಷದಲ್ಲಿ ಆಗುವ ಬದಲಾವಣೆ ನೇರವಾಗಿ ಭೂನ್ಯಾಯ ಮಂಡಲಿಯ ಸದಸ್ಯರ ಬದಲಾವಣೆಯಲ್ಲಿ ಪರಿಣಾಮ ಬೀರುವುದು ಒಂದು ಪದ್ಧತಿಯಾಗಿ ಬಿಟ್ಟಿದೆ. 1978 ರಲ್ಲಿ ವಿಧಾನಸಭೆಗೆ ನಡೆಯುವ ಚುನಾವಣೆಯ ಸಮಯದಲ್ಲಿ ಇದ್ದ ಗವರ್ನರ ಆಡಳಿತದಲ್ಲಿ ಕೂಡ ಗೋವಿಂದ ನಾರಾಯಣ ಈ ದಿಸೆಯಲ್ಲಿ ಸದಸ್ಯರನ್ನು ಬದಲಾಯಿಸಲು ಪ್ರಯತ್ನಿಸಿದರು ಅನ್ನುವ ಅಪಾದನೆ [illegible] ಅಂದ ಮೇಲೆ ರಾಜಕೀಯದಲ್ಲಿ ನಡೆಯುವ ಯಾವುದೇ ಬದಲಾವಣೆ ಸದಸ್ಯರನ್ನು ಬದಲಾಯಿಸುವಲ್ಲಿ

# ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ವ್ಯಾಪಕ ಕಾರ್ಯಕ್ರಮ

ಕರ್ನಾಟಕದಲ್ಲಿ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ಕೈಮಗ್ಗ ಮತ್ತು ಕರಕುಶಲ ಕೈಗಾರಿಕೋದ್ಯಮಗಳ ಅಭಿವೃದ್ಧಿಗಾಗಿ ಹೊಸ ಉತ್ತೇಜಕ ವಾತಾವರಣ ಕಲ್ಪಿತವಾಗಿದೆ.

೧೯೮೪-೮೫ ನೇ ಸಾಲಿಗಾಗಿ ಸಣ್ಣ ಹಾಗೂ ಗೃಹ ಕೈಗಾರಿಕೆಗಳ ಅಭಿವೃದ್ಧಿ ಸಾಧಿಸಲು ಅನೇಕ ಆಶಾದಾಯಕವಾದ ಹೊಸ ಯೋಜನೆಗಳನ್ನು ರೂಪಿಸಲಾಗಿದೆ.

ಈ ಯೋಜನೆಗಳು, ಆಸಕ್ತ ಕೈಗಾರಿಕೋದ್ಯಮಿಗಳಿಗೆ ಆರ್ಥಿಕ ಸಹಾಯ ಮತ್ತು ತಾಂತ್ರಿಕ ಜ್ಞಾನವನ್ನು ಸಹ ಒದಗಿಸುತ್ತವೆ.

ಈ ಯೋಜನೆಗಳು :

೧. 1985ನೇ ಡಿಸೆಂಬರ್ ತಿಂಗಳ ವೇಳೆಗೆ 36 ಕೋಟಿ ರೂ ವೆಚ್ಚದಲ್ಲಿ 1510 ಕೈಗಾರಿಕಾ ಷೆಡ್ಡುಗಳನ್ನು ನಿರ್ಮಿಸಲಾಗುವುದು. ಕಳೆದ ೨೮ ವರ್ಷಗಳಲ್ಲಿ 120 ಕೋಟಿ ರೂ ವೆಚ್ಚದಲ್ಲಿ 2000 ಕೈಗಾರಿಕಾ ಷೆಡ್ಡುಗಳನ್ನು ಮಾತ್ರ ನಿರ್ಮಿಸಲಾಗಿತ್ತು.

೨. ಔಷಧಿಗಳು, ಚರ್ಮ ಮತ್ತು ಕೈಗಾರಿಕಾ ಸಲಕರಣೆಗಳು, ಮುಂತಾದವುಗಳಿಗೆ ಸಕ್ರಿಯ ಕೈಗಾರಿಕಾ ಎಸ್ಟೇಟುಗಳನ್ನು ಸ್ಥಾಪಿಸಲಾಗುವುದು.

೩. ಸಣ್ಣ ಕೈಗಾರಿಕೆಗಳ ಮಾರಾಟ ನಿಗಮದ ನಿರ್ಮಾಣ.

೪. ಕೈಮಗ್ಗ ತಾಂತ್ರಿಕ ಸಂಸ್ಥೆಯ ಸ್ಥಾಪನೆ.

೫. ರಾಜ್ಯದ ನಾರು ಅಭಿವೃದ್ಧಿ ನಿಗಮದ ಸ್ಥಾಪನೆ.

೬. ಪ್ರಾಥಮಿಕ ಸಹಕಾರಿ ಕೈಮಗ್ಗ ಸಂಘಗಳ ಎಲ್ಲ ನೇಕಾರ ಸದಸ್ಯರುಗಳಿಗೂ ಈಗ ಅನ್ವಯವಾಗುತ್ತಿರುವ ಉಳಿತಾಯ ಕಾಣಿಕೆ ನಿಧಿ ಯೋಜನೆಯನ್ನು **(contributory thrift fund scheme)** ಕೈಗಾರಿಕಾ ಅಭಿವೃದ್ಧಿ ನಿಗಮಕ್ಕೆ ವಿಸ್ತರಿಸುವುದು.

೭. ಚರ್ಮ ತಾಂತ್ರಿಕ ಸಂಸ್ಥೆಯ ಸ್ಥಾಪನೆ.

೮. ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರಿಗಾಗಿಯೇ ಪ್ರತ್ಯೇಕವಾಗಿ ಕೈಗಾರಿಕಾ ವಲಯಗಳ ಅಭಿವೃದ್ಧಿ.

ಕರ್ನಾಟಕ ವಾರ್ತೆ.

ಪರಿಸ್ಕಾರೆ. ಉದಾಹರಣೆಗೆ ಹೆಚ್ಚಿನ ದಕ್ಷತೆಯಿಂದ ಕಾರ್ಯ ನಿರ್ವಹಿಸಿರುವ ಮೈಸೂರು ತಾಲ್ಲೂಕು ಭೂಮಂಡಳಿ ಕೂಡ ಇಲ್ಲಿಯ ಸದಸ್ಯರಾದ ಜಯದೇವರಾಜ್ ಅರಸ್ ಹೇಳುವಂತೆ ಅವರ ಐದು ವರ್ಷಗಳ ಸದಸ್ಯತ್ವದ ಸಮಯದೊಳಗೆ ಕೇವಲ 10 ಬಾರಿ ಮಾತ್ರ ಸ್ಥಳ ಪರಿಶೀಲನೆ ಮಾಡಿದ್ದಾರೆ 12. ಅಂದ ಮೇಲೆ ಇನ್ನುಳಿದ ಭೂ ನ್ಯಾಯ ಮಂಡಳಿಗಳು ಎಷ್ಟು ಮಟ್ಟಿಗೆ ಈ ಸಾಧ್ಯತೆಯನ್ನು ಬಳಸಿಕೊಂಡಿವೆ ಎಂದು ಊಹಿಸಬಹುದು

ಅಧಿಕಾರ ಶಾಹಿಯಲ್ಲಿ ಹೆಚ್ಚಿನ ಮಂದಿ ಇರುವ ಬ್ರಾಹ್ಮಣರಿಗೆ ಆಗಿರುವ ಅನ್ಯಾಯಗಳನ್ನೂ ನಾವು ಗಣನೆಗೆ ತೆಗೆದು ಕೊಳ್ಳಬೇಕಾಗುತ್ತದೆ. ವ್ಯವಸಾಯ ಕ್ಷೇತ್ರದಲ್ಲಿ ಇವರಿಗೆ 2 ಹಂತಗಳಲ್ಲಿ ಪೆಟ್ಟು ಬಿದ್ದಿರುವುದನ್ನು ಕಾಣಬಹುದು. 1. ಇನಾಂ ರದ್ದತಿ ಕಾನೂನು 2. ಗೇಣಿ ರದ್ದತಿ ಕಾನೂನು.

ಇನಾಂ ರದ್ದತಿ ಕಾನೂನಿಂದ ಹೆಚ್ಚು ಪೆಟ್ಟು ಬಿದ್ದದ್ದು ಬ್ರಾಹ್ಮಣರಿಗೆ ಏಕೆಂದರೆ [ಬ್ರಾಹ್ಮಣರಿಗೆ ಕೊಟ್ಟಿದ್ದ ಬಹುಪಾಲು ಭೂಮಿ ಇನಾಮ್ತಿ ಜಮೀನು ಈ ಜಮೀನುಗಳಲ್ಲಿ ಬಹಳಷ್ಟು ವಿಧದ ಇನಾಂತಿಗಳಿದ್ದು ಅವುಗಳಲ್ಲಿ ಕಂದಾಯ ಕಟ್ಟಬೇಕಾಗಿರಲಿಲ್ಲ. ''ದಿವಾನ ಪೂರ್ಣಯ್ಯನವರ ಕಾಲದಲ್ಲಿ ಇನಾಂತಿ ಜಮೀನುಗಳ ಬಗ್ಗೆ ಒಂದು ವಿವರವಾದ ಸರ್ವೆ ನಡೆಯಿತು. ಆ ಸಮಯದಲ್ಲಿ ಒಟ್ಟು ಹದಿಮೂರು ರೀತಿಯ ಇನಾಂತಿಗಳಿರುವುದನ್ನು ಪತ್ತೆ ಹಚ್ಚಲಾಯಿತು. ಕಂದಾಯ ಇಲ್ಲದ ಇನಾಂತಿಗಳನ್ನು ಇನ್ನು ಮುಂದೆ ದಾನ ಮಾಡುವುದು ಸರ್ಕಾರದ ಬೊಕ್ಕಸಕ್ಕೆ ನಷ್ಟ ತುಂಬುವ ಅಂಶ ಎಂದು ಕಂಡು ಬಂದಿದ್ದರಿಂದ ಹಲವಾರು ಇನಾಂತಿಗಳನ್ನು ಜೋಡಿ ಇನಾಂತಿಗಳಾಗಿ ಪರಿವರ್ತಿಸಲಾಯಿತು. ಈ ಇನಾಂತಿ ಸರಳ ಕಂದಾಯವನ್ನು ಕೊಡಬೇಕಾಗಿತ್ತು.

1866 ರಲ್ಲಿ ನಡೆಸಿದ ಸರ್ವೆಯ ಪ್ರಕಾರ ಕೆಳಕಂಡಷ್ಟು ಪ್ರಮಾಣದ ಕಂದಾಯದ ಮೌಲ್ಯವಿರುವ ಇನಾಂತಿ ಜಮೀನುಗಳನ್ನು ಗುರ್ತಿಸಲಾಯಿತು.

ಸಂಪೂರ್ಣ ಹಳ್ಳಿಯ ಇನಾಂತಿ—605205 ರೂ.
ಕುಶಲಕರ್ಮಿಗಳ ಇನಾಂತಿ—194585 ರೂ.ಗಳು
ಜೋಡಿ ಇನಾಂತಿ—616669ರೂ.ಗಳು

ಒಟ್ಟು 57,888 ಇನಾಂತಿಗಳನ್ನು ಖಾಯಂಗೊಸಲಾಯಿತು. ಅವುಗಳಲ್ಲಿ 57,726 ಇನಾಂತಿಂಗಳಗೆ ನಿರ್ಬಂದ ತೆರಿಗೆಯನ್ನು ಹೇರಲಾಯಿತು. ಉಳಿದ 162 ಇನಾಂತಿಗಳಿಗೆ ವಿನಾಯತಿ ನೀಡಲಾಯಿತು. 4.054 ಇನಾಂತಿಗಳನ್ನು ರದ್ದು ಪಡಿಸಿ ಸರ್ಕಾರದ ವಶಕ್ಕೆ ತೆಗೆದು ಕೊಂಡರು. 1953 ಇನಾಂತಿಗಳನ್ನು ಹಣ ತೆರಬೇಕಾದ ಇನಾಂತಿಗಳಾಗಿ ಬದಲಾಯಿಸಿದರು. 13

The Mysore(Personal and miscelleaneous) Inams Abolition Act 1954 ರ ಪ್ರಕಾರ ಎಲ್ಲಾ ಇನಾಂತಿ ಜಮೀನು ಸರ್ಕಾರಕ್ಕೆ ಸೇರುತ್ತದೆ. ಹಾಗೂ ಅದು ವಿಧಿಸುವ ಕಂದಾಯಕ್ಕೆ ಒಳಪಟ್ಟಿರುತ್ತದೆ. 14 ಹೀಗಾಗಿ ಬಹಳಷ್ಟು ಬ್ರಾಹ್ಮಣರು ಭೂಮಿಯನ್ನು ಕಳೆದುಕೊಂಡು ಪಟ್ಟಣಗಳಿಗೆ ವಲಸೆ ಹೋಗಬೇಕಾಯಿತು. ಇಲ್ಲಿ ಅವರು ಕಾರಕೂನರಾಗಿ ಅಥವಾ ಸರ್ಕಾರದ ಯಾವುದಾದರೂ ಕಛೇರಿಗಳಲ್ಲಿ ಕೆಲಸ ಮಾಡುವವರಾಗಿ ಸೇರಿಕೊಂಡರು. ಅವರ ಬಳಿ ಉಳಿದಿದ್ದ ಅಲ್ಪ ಸ್ವಲ್ಪ ಜಮೀನನ್ನು ಗೇಣಿಗೆ ಕೊಡುವುದು ಅನಿವಾರ್ಯವಾಯಿತು. 2ನೆಯದಾಗಿ ಗೇಣಿ ಕಾನೂನು ಬಂದಾಗ ಇದ್ದ ಬದ್ದ ಆಸ್ತಿಯನ್ನು ಅವರು ಸಂಪೂರ್ಣವಾಗಿ ಗೇಣಿ ದಾರರಿಗೆ ಬಿಟ್ಟು ಕೊಡಬೇಕಾಯಿತು, ಉದಾಹರಣೆಗೆ 'ಹುಣಸೂರು ತಾಲ್ಲೂಕಿನ ಉಂಡವಾಡಿ ಅನ್ನುವ ಗ್ರಾಮದಲ್ಲಿ 30 ವರ್ಷಗಳ ಹಿಂದೆ ವಾಸವಾಗಿದ್ದ ಕುಟುಂಬಗಳು ಎಲ್ಲಾ ಬ್ರಾಹ್ಮಣರವು. ಸುತ್ತ ಮುತ್ತಲ ಜಮೀನಿಗೆಲ್ಲ ಇವರೇ ಒಡೆಯರು. ಕಾಲಕ್ರಮೇಣ ಇವರು ಪಟ್ಟಣದ ಕೆಲಸಗಳನ್ನು ಹಿಡಿದಿದ್ದರಿಂದ ಜಮೀನೆಲ್ಲಾ ಗೇಣಿಗೆ ಕೊಡಬೇಕಾಯಿತು. ಈ ಕಾನೂನು ಬಂದನಂತರ ಅಲ್ಲಿನ ಒಕ್ಕಲಿಗ ಜಾತಿಯ ಗೇಣುದಾರರಿಗೆ ತಮ್ಮ ನೆಲೆ ಬಿಟ್ಟು ಕೊಡುವುದು ಅನಿವಾರ್ಯವಾಯಿತು. ಈಗ ಅಲ್ಲಿ ಒಂದೇ ಒಂದುಬ್ರಾಹ್ಮಣ ಕುಟುಂಬವೂ ಇಲ್ಲದೆ. ಎಲ್ಲರೂ. ಪಟ್ಟಣಗಳಿಗೆ ವಲಸೆಹೋಗಿದ್ದಾರೆ.

ಈ ಎಲ್ಲಾ ಹಂತಗಳಲ್ಲೂ ಅನ್ಯಾಯಕ್ಕೆ ಒಳಗಾದ ಬ್ರಾಹ್ಮಣರು ತಮ್ಮ ಅತೃಪ್ತಿಯನ್ನು ಹಲವಾರು ರೀತಿಗಳಲ್ಲಿ ಅಭಿವ್ಯಕ್ತಿಸತೊಡಗಿದರು. ಇವರು ಅಧಿಕಾರ ಶಾಹಿ ಸ್ಥಾನದಲ್ಲಿ ಗಣನೀಯ ಸ್ಥಾನ ಪಡೆದಿರುವುದರಿಂದ ಗೇಣಿ ಕಾನೂನನ್ನು ಜಾರಿಗೊಳಿಸುವ ಹಂತದಲ್ಲಿ ನಿಧಾನಗತಿಯ ತಂತ್ರ ಉಪಯೋಗಿಸಿದರು ಅನಿಸುತ್ತದೆ. ಹಲವಾರು ಕೇಸುಗಳು ಇನ್ನೂ ಅತ್ತಿಂದಿತ್ತ ಚಂಡಾಡುತ್ತಿರುವುದಕ್ಕೆ ಇದೂ ಒಂದು ಕಾರಣ ಅಂತ ಕಾಣುತ್ತದೆ. ತಮಗೆ ಆಗಿರುವ ಅನ್ಯಾಯಗಳ ವಿರುದ್ಧ ಹೋರಾಡಲು ಬಹುಪಾಲು ಬ್ರಾಹ್ಮಣರೇ ಇರುವ ಸಣ್ಣ ಭೂ ಹಿಡುವಳಿದಾರರ ಸಂಘವನ್ನು ಸ್ಥಾಪಿಸಿದರು. ಈ ಸಂಘದಲ್ಲಿ 11 ಸಾವಿರಸದಸ್ಯರಿದ್ದಾರೆ ಎಂದು ಮೈಸೂರು ವಿಭಾಗದ ಸಂಚಾಲಕರು ಹೇಳುತ್ತಾರೆ. ಇಲ್ಲಿಯ ಬಹುಮಂದಿ ಸದಸ್ಯರು ಇನ್ನೂ ಭೂ ಪರಿಹಾರದ ಹಣವನ್ನು ತೆಗೆದುಕೊಳ್ಳದೆ ಭೂಮಿಯನ್ನೇ ವಾಪಸ್ಸು ಪಡೆಯಬಹುದು ಅನ್ನುವ ಆಶೆಯಿಂದ ಕಾಯುತ್ತಿದ್ದಾರೆ. ಭೂ ಸುಧಾರಣ ಕಾನೂನಿನ ವಿರುದ್ಧ ಸುಪ್ರೀಂಕೋರ್ಟಿಗೆ ಅರ್ಜಿಯನ್ನು ಸಲ್ಲಿಸಿದ್ದಾರೆ.16

**ಟ್ರಿಬುನಲ್‌ನ ಖರ್ಚು ವೆಚ್ಚಗಳು :**

ಇವು 1974 ರಲ್ಲೇ ಪ್ರಾರಂಭವಾಗುವ ಆಜ್ಞೆಯನ್ನು ಪಡೆದರೂ ಕಾರ್ಯನಿರ್ವಹಣೆ ಶುರುವಾದದ್ದು 1975 ರಲ್ಲಿ. ತಾಲ್ಲೂಕಿಗೊಂದರಂತೆ 1976 ರ ವೇಳೆಗೆ ಒಟ್ಟು 175 ಟ್ರಿಬುನಲ್‌ಗಳ ಸ್ಥಾಪನೆಯಾಯಿತು. 1978 ರ ವೇಳೆಗೆ 182 ಹಾಗೂ 1981 ರ ವೇಳೆಗೆ 292 ಟ್ರಿಬುನಲ್‌ಗಳು ಸ್ಥಾಪನೆಯಾಗಿ ಕೆಲವು ಕಾಲ ಮಾತ್ರ ಜೀವಂತವಾಗಿದ್ದು ಕೊನೆಯುಸಿರೆಳೆದವು. ಅತಿ ಹೆಚ್ಚಿನ ಕೇಸುಗಳು ದಾಖಲಾಗಿದ್ದು ದಕ್ಷಿಣ ಕನ್ನಡದಲ್ಲಿ (179839 ಗೇಣಿ ಅರ್ಜಿಗಳು; 182961 ಭೂಮಿತಿಯ ಅರ್ಜಿಗಳು) ಇಲ್ಲಿಯ 8 ತಾಲ್ಲೂಕುಗಳಿಗೆ 55 ಟ್ರಿಬುನಲ್ ಗಳನ್ನು ಸ್ಥಾಪಿಸಲಾಯಿತು.

ಭೂಮಂಡಳಿಯ ಸದಸ್ಯರುಗಳಿಗೆ ಸಂಬಳ ಹಾಗೂ ಅವರ ಪ್ರಯಾಣ ಭತ್ಯವನ್ನು ಕೊಡುವ ಜವಾಬ್ದಾರಿಯನ್ನು ಸರ್ಕಾರ ನಿರ್ವಹಿಸಿತು. ಈ ಬಾಬ್ತು ಒಟ್ಟಾರೆ 12.5 ಕೋಟಿ ರೂಗಳನ್ನು ವೆಚ್ಚ ಮಾಡಿತು. ಅಂದರೆ ಒಂದೊಂದು ಅರ್ಜಿಯನ್ನು ತೀರ್ಮಾನ ಮಾಡಲು ಸುಮಾರು 133 ರೂಗಳ ಖರ್ಚು ತಗಲುತ್ತದೆ. ಸರ್ಕಾರಕ್ಕೆ ಇಷ್ಟು ಮೊತ್ತದ ಹಣ ಒಂದು ತಲೆಭಾರವೇ ಎಂದು ಹೇಳಬೇಕು. ಇದಲ್ಲದೆ ಭೂಕಂದಾಯ ಮಂತ್ರಿಯಾಗಿದ್ದ ಬಂಗಾರಪ್ಪನವರು,

'ಗೇಣಿ ಕಾನೂನಿನಲ್ಲಿ ಭೂಮಿಕಳೆದುಕೊಂಡ ವಿಧವೆಯರು, ಅಪ್ರಾಪ್ತ ವಯಸ್ಕರಿಗೆ ಹಾಗೂ ಸಣ್ಣ ಹಿಡುವಳಿದಾರರಿಗೆ ಕೂಡಲೇ ಪರಿಹಾರ ಕೊಡಬೇಕೆಂದರೆ ಇನ್ನೂ ನೂರಿಪ್ಪತ್ತು ಕೋಟಿ ರೂಗಳಾದರೂ ಬೇಕು ಎಂದಿದ್ದಾರೆ.

ತಮ್ಮ ಹೆಚ್ಚುವರಿ ಭೂಮಿಯನ್ನು ಸರ್ಕಾರದ ಸುಪರ್ತಿಗೆ ವಹಿಸಿ ಕೊಡುವ ಭೂಮಾಲೀಕರಿಗೆ ಪರಿಹಾರವಾಗಿ ಸರ್ಕಾರ ರಿಸರ್ವಬ್ಯಾಂಕಿನ ಬಾಂಡುಗಳ ರೂಪದಲ್ಲಿ ಕೊಡಲಿದೆ. ಸರ್ಕಾರದ ಲೆಕ್ಕಾಚಾರದ ಪ್ರಕಾರ 4 ಲಕ್ಷ ಎಕರೆ ಹೆಚ್ಚುವರಿ ಭೂಮಿ ದಕ್ಕುತ್ತದೆ ಎಂದು ಅಂದಾಜು ಮಾಡಿತ್ತು. ಆದರೆ 2 83 ಲಕ್ಷ ಎಕರೆ ಭೂಮಿ ಮಾತ್ರ ಹೆಚ್ಚುವರಿ ಎಂದು ತೀರ್ಮಾನವಾಗಿದೆ. ಇದರಲ್ಲೂ ಕೆಲವು ಭೂಮಾಲೀಕರು ಭೂಮಿಯನ್ನು ಬಿಟ್ಟು ಕೊಡದೆ ಹೈಕೋರ್ಟಿನಿಂದ ತಡೆಯಾಜ್ಞೆ ತಂದಿದ್ದಾರೆ. ಹೀಗಾಗಿ ಕೊನೆಗೆ ಸರ್ಕಾರಕ್ಕೆ ಈ ಬಾಬ್ತು ದಕ್ಕುವ ಭೂಮಿ ಬಹಳ ಕಡಿಮೆ. ಅತಿ ಹೆಚ್ಚಿನ ಹೆಚ್ಚುವರಿ ಭೂಮಿ ದಕ್ಕಿದ್ದು ರಾಯಚೂರು (88 ಸಾವಿರ ಎಕರೆಗಳು) ಇಲ್ಲಿಯ ಭೂಮಿ ಎಲ್ಲ ಫಲವತ್ತಲ್ಲದ ಒಣಭೂಮಿ ಅನ್ನುವುದನ್ನು ಗಮನಿಸುವುದು ಮುಖ್ಯ. ಜೂನ್ 1982 ರ ಕೊನೆಯ ವರೆಗೆ

ಕೊನೆಗೊಳ್ಳುತ್ತದೆ.

ಭೂನ್ಯಾಯ ಮಂಡಳಿಯ ಬಹಳ ಪಾಲು ಸದಸ್ಯರು ಕಾಂಗ್ರೆಸ್–ಐ ನವರೇ ನೇಮಕವಾದ್ದರಿಂದ ವಿರೋಧ ಪಕ್ಷವಾದ (ಜೆ) ಕಾಂಗ್ರೆಸ್‌ನ ವಿರೋಧ ಪಕ್ಷದ ಸದಸ್ಯರಿಗೆ ನ್ಯಾಯಮಂಡಳಿಗಳಲ್ಲಿ ಸರಿಯಾದ ಸದಸ್ಯತ್ವ ಕೊಟ್ಟಿಲ್ಲ ಎಂದು ದೂರಿಕೊಂಡಿತು. ಈ ಕಾರಣಕ್ಕಾಗಿ ಆಗ ವಿರೋಧ ಪಕ್ಷದ ಸದಸ್ಯರಾಗಿದ್ದ ಬಸವಲಿಂಗಪ್ಪ ಭೂನ್ಯಾಯ ಮಂಡಳಿಯ ಸದಸ್ಯರಾಗಬೇಕಾಗಿದ್ದ ಸ್ಥಾನದಿಂದ ರಾಜೀನಾಮೆ ಕೊಟ್ಟರು. ಭೂನ್ಯಾಯ ಮಂಡಳಿಗೆ ಕೊಟ್ಟ ಇವರ ರಾಜೀನಾಮೆ ಹೆಚ್ಚಿನ ವಿರೋಧ ಪಕ್ಷದ ಸದಸ್ಯರನ್ನು ಭೂನ್ಯಾಯ ಮಂಡಳಿಗಳಿಗೆ ಆಯ್ಕೆ ಮಾಡುವುದರಲ್ಲಿ ಸಫಲವಾಗದೆ ಇದ್ದುದು ಒಂದು ದುರಂತ.

ಈ ಸಂದರ್ಭದಲ್ಲಿ ಆಡಳಿತ ಕಾಂಗೈ ಪಕ್ಷದಲ್ಲೇ ಹುಟ್ಟಿಕೊಂಡ ಒಡಕು ಬಹಳ ಕುತೂಹಲಕಾರಿಯಾದದ್ದು. ಕರ್ನಾಟಕದಲ್ಲಿ 1979 ರಲ್ಲಿ ಚುನಾವಣೆಗಳು ನಡೆದು ಕಾಂಗೈ ಬಹುಮತ ಪಡೆದು ಸರ್ಕಾರ ರಚನೆ ಮಾಡಿತು. ಈ ಸಂದರ್ಭದಲ್ಲಿ ಮುಖ್ಯಮಂತ್ರಿಯ ಪದವಿ ಬಂಗಾರಪ್ಪನವರು. ತಮಗೆ ದೊರಕುತ್ತದೆ ಅನ್ನುವ ಆಶೆ ಹೊಂದಿದ್ದರು. ಆದರೆ ಈ ಸ್ಥಾನದಿಂದ ಅವರು ವಂಚಿತರಾಗಿ ಗುಂಡೂರಾವ್‌ರು ಮುಖ್ಯಮಂತ್ರಿಗಳಾದರು. ಬಂಗಾರಪ್ಪನವರು ಕಂದಾಯ ಮಂತ್ರಿಗಳು ಹಾಗೂ ಪ್ರದೇಶ ಕಾಂಗ್ರೆಸ್ ಸಮಿತಿಯ ನಾಯಕರಾದರು. ಹೀಗೆ ಈ ಎರಡೂ ಪ್ರಮುಖ ಸ್ಥಾನಗಳ ಹಿನ್ನೆಲೆಯಲ್ಲಿ ಕಾಂಗೈ ಪಾರ್ಟಿಗೆ ಅಂದರೆ ತಮ್ಮ ಬೆಂಬಲಿಗರ ಒಂದು ಹೊಸ ಪಟ್ಟಿಯನ್ನು ತಯಾರುಮಾಡಿನಿಷ್ಕ್ರಿಯ ಸದಸ್ಯರನ್ನು ತೆಗೆದು ಹಾಕಿ ಭೂನ್ಯಾಯ ಮಂಡಳಿಗೆ ಹೊಸ ಸದಸ್ಯರನ್ನು ಆಯ್ಕೆ ಮಾಡಿದ್ದೇನೆ ಅನ್ನುವ ಅಹವಾಲನ್ನು ಮುಖ್ಯಮಂತ್ರಿಗಳ ಎದುರಿಗಿಟ್ಟರು. ಆದರೆ ಮುಖ್ಯಮಂತ್ರಿಯಾಗಿದ್ದ ಗುಂಡೂರಾವ್ ಅವರು ಆ ಪಟ್ಟಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ತಮ್ಮ ಬೆಂಬಲಿಗರಿಗೆ ಅವಕಾಶ ಕೊಟ್ಟು ಹಲವಾರು ಬದಲಾವಣೆಗಳೊಂದಿಗೆ ಇನ್ನೊಂದು ಪಟ್ಟಿಯನ್ನು ತಯಾರಿಸಿದರು. ಈ ವಿಷಯದ ಬಗ್ಗೆ ಬಂಗಾರಪ್ಪ ತಮ್ಮ ಅಸಮ್ಮತಿಯನ್ನು ಬಹಿರಂಗಪಡಿಸಿದರು. ಒಳ ಜಗಳಗಳು ಕ್ರಮೇಣ ಬೆಳೆದು ಬಂಗಾರಪ್ಪನವರ ರಾಜೀನಾಮೆಯಲ್ಲಿ ಪರ್ಯವಸಾನವಾಯಿತು. ಇವರ ರಾಜೀನಾಮೆಯೊಂದಿಗೆ ಬಂಗಾರಪ್ಪನವರಿಗೆ ಪರವಾಗಿದ್ದ ಹಲವಾರು ಭೂನ್ಯಾಯ ಮಂಡಳಿಯ ಸದಸ್ಯರು ಸದಸ್ಯತ್ವದಿಂದ ವಂಚಿತರಾದರು. ಉದಾಹರಣೆಗೆ ಹೆಗ್ಗಡ ದೇವನಕೋಟೆ ತಾಲ್ಲೂಕಿನ ಗಂಗಪ್ಪ ಹೊಸಳ್ಳಿಯ ಬಸವರಾಜು ಅವರು ಬಂಗಾರಪ್ಪನವರು ಅನುಯಾಯಿಗಳಾದ್ದರಿಂದ ಸದಸ್ಯತ್ವವನ್ನು ಕಳೆದುಕೊಂಡರು. ಇದಕ್ಕೆ ವಿರುದ್ಧವಾಗಿ ಗುಂಡೂರಾವರ ಸಂಬಂಧಿಕರಾದ ಚಂದ್ರಯ್ಯ ಯಾವುದೇ ಅರ್ಹತೆಯಿಲ್ಲದಿದ್ದರೂ ಸದಸ್ಯರಾದರು ಅನ್ನುವ ಭಾವನೆ ಮೈಸೂರು ತಾಲ್ಲೂಕಿನಜನಕ್ಕಿದೆ. ಹೀಗೆ ರಾಜಕೀಯ ಬದಲಾವಣೆಗಳು ನೇರವಾಗಿ ಭೂನ್ಯಾಯ ಮಂಡಳಿಯ ಮೇಲೆ ಪರಿಣಾಮ ಬೀರಿದವು. ಇಂಥ ಮಂಡಳಿಗಳ ರಚನೆಯಲ್ಲಿ ಸದಸ್ಯರ ಸಾಮರ್ಥ್ಯ,ನ್ಯಾಯ ಪರತೆ ಮತ್ತು ಅವರ ಬುದ್ಧಿವಂತಿಕೆ ಮುಖ್ಯವಾಗದೆ ತಮ್ಮ ತಮ್ಮ ಪಕ್ಷದ ಅಥವಾ ಸ್ವಾರ್ಥಸಾಧನೆಗಳಿಗೆ ಮಾಧ್ಯಮವಾದ್ದರಿಂದ ಬಹುಪಾಲು ಸದಸ್ಯರು ಅಯೋಗ್ಯರೇ ಆಯ್ಕೆಯಾದರು.

ಈ ಸಂದರ್ಭದಲ್ಲಿ ಮಂಡ್ಯದ ಕಾಂಗೈನ ಹೆಚ್. ಟಿ. ಕೃಷ್ಣಪ್ಪ ಸದಸ್ಯರನ್ನು ಆಯ್ಕೆಮಾಡಲು ಅಲ್ಲಿಯ ಎಮ್.ಎಲ್.ಎ. ಗಳಿಗೆ ಹೆಚ್ಚಿನ ಅಧಿಕಾರ ಕೊಡಬೇಕೆಂದು ಕೇಳಿಕೊಂಡರು. ಆದರೆ ಅದು ಫಲಪ್ರದವಾಗಲಿಲ್ಲ. ಮಂಡ್ಯದ ಎಮ್.ಪಿ.–ಎಸ್. ಎಮ್. ಕೃಷ್ಣ ಗುಂಡೂರಾವ್‌ರ ಹೊಸ ತಯಾರಿಕೆಯಲ್ಲೇ ಸಂಪೂರ್ಣ ಕೈವಾಡ ಮಾಡಿದರು ಅನ್ನುವ ಅಪಾದನೆ ಇದೆ.

ಹೀಗೆ ಆಡಳಿತ ಪಕ್ಷದಲ್ಲೇ ಇದ್ದ ಒಡಕುಗಳು ಇನ್ನೂ ಹೆಚ್ಚು ಆಳವಾಗಿದ್ದು ಟ್ರಿಬುನಲ್‌ಗಳ ರಚನೆಯ ಸಂಧರ್ಭದಲ್ಲಿ ಹೀಗಾಗಿ ಕರ್ನಾಟಕದಲ್ಲಿ ಕಾಂಗೈಪಕ್ಷ ಬಹುಮತವನ್ನು ಕಳೆದುಕೊಳ್ಳುವುದಕ್ಕೆ ಈ ಹಿನ್ನೆಲೆಯಲ್ಲಿ ಪ್ರಾರಂಭವಾದ ಒಡಕೂ ಒಂದು ಕಾರಣವಾಗಿದ್ದು ಪಕ್ಷವನ್ನು ಬಲಹೀನ ಮಾಡುವುದರಲ್ಲಿ ಗಣನೀಯ ಪಾತ್ರ ವಹಿಸಿರಬಹುದು ಅನ್ನಿಸುತ್ತಿದೆ."11

ಸರಕಾರ ಹಾಗೂ ಆಡಳಿತ ಶಾಹಿ

ಬ್ರಾಹ್ಮಣರ ಇರಿಸು ಮುರಿಸು :

ಅಧಿಕಾರಕ್ಕೆಬರಲು ಓಟುಗಳು ಅಗತ್ಯವಾದ್ದರಿಂದ ಯಾವ ರೀತಿಯಲ್ಲಿ ಓಟಿನ ಬ್ಯಾಂಕನ್ನು ಸಿದ್ಧಗೊಳಿಸಬೇಕು ಎನ್ನುವುದನ್ನು ರಾಜಕಾರಣಿಗಳು ಆಲೋಚಿಸುತ್ತಾರೆ, ಈ ದಿಕ್ಕಿನಲ್ಲಿ ಶೋಷಿತಜನತೆ ಸಂಘಟಿತವಾಗಿ ಆಲೋಚಿಸುವುದಕ್ಕಿಂತ ಶೋಷಕರು ತಾವು ಅಧಿಕಾರದಲ್ಲಿ ಉಳಿಯಲುಏನೆಲ್ಲ ನಾಟಕವಾಡಬೇಕು ಯಾವ ಪಾತ್ರ ವಹಿಸಬೇಕು ಯಾವ ವೇಶ ತೊಡಬೇಕು ಅನ್ನುವುದರ ಬಗ್ಗೆ ಚಿಂತಿಸುತ್ತಾರೆ ಇಂಥ ಒಂದು ಪ್ರಜ್ಞೆಯಿಂದ ಹುಟ್ಟಿದ್ದೇ ಭೂಸುಧಾರಣೆ ಏನೋ ಅನ್ನಬಹುದು.

ಆಡಳಿತದಲ್ಲಿರುವ ಸರ್ಕಾರ ತಾನು ಉಳಿಯಲು ಅಧಿಕಾರ ಶಾಹಿಗಳ ಸಹಾಯ ಅಗತ್ಯವಾಗಿರುತ್ತದೆ ಅಂದರೆ ಆಡಳಿತದಲ್ಲಿರುವ ಸರ್ಕಾರ ಅಧಿಕಾರ ಶಾಹಿಗಳು ಒಮ್ಮತಕ್ಕೆ ಬರಬೇಕಾಗುತ್ತವೆ. ತಾವು ಹಾಕಿಕೊಂಡಿರುವ ಉದ್ದೇಶಗಳು ಅಂದರೆ ಆಡಳಿತದಲ್ಲಿ ಮುಂದುವರಿಯಲು ಅನುವು ಮಾಡಿಕೊಡುವ ಸಾಧನೆಗಳು ಕಾರ್ಯಗತವಾಗಬೇಕಾದರೆ ಅಧಿಕಾರ ಶಾಹಿಗಳ ಸಹಕಾರ, ಕಾರ್ಯದಕ್ಷತೆ ಅತಿಮುಖ್ಯವಾಗಿರುತ್ತದೆ. ಇವರೀರ್ವರ ನಡುವೆಯೂ ಸರಿಯಾದ ಹೊಂದಾಣಿಕೆ ಇಲ್ಲದಿದ್ದರೆ ಆಳುವ ವರ್ಗದ ಯೋಜನೆಗಳು ಜನತೆಗೆ ಮುಟ್ಟುವುದಿಲ್ಲ. ಹೀಗಾದಾಗ ಎದುರು ಪಕ್ಷದವರು ಆಡಳಿತಕ್ಕೆ ಬರುವ ಸಾಧ್ಯತೆ ಇದೆ. ಕರ್ನಾಟಕದ ದೃಷ್ಟಿಯಿಂದ ಯೋಚನೆ ಮಾಡಿದಾಗ ಆಡಳಿತದಲ್ಲಿದ್ದ ಕಾಂಗ್ರೆಸ್ ಸರ್ಕಾರದ ಸೋಲಿಗೆ ಅಧಿಕಾರ ಶಾಹಿ ಮತ್ತು ಆಡಳಿತ ಶಾಹಿಯಲ್ಲಿ ಸಾಮ್ಯತೆ ಇಲ್ಲದಿರುವುದು ಒಂದು ಕಾರಣವಾಗಿರಬಹುದು. ಯಾಕೆಂದರೆ ಭೂಸಂಧಾರಣೆಯ ಕಾನೂನುಗಳಲ್ಲಿ ಬಹುಮುಖ್ಯವಾಗಿ ಬಲಿಯಾದವರು ಬ್ರಾಹ್ಮಣರು. ಬ್ರಾಹ್ಮಣರು ಅಲ್ಪ ಸಂಖ್ಯಾತರಿದ್ದರೂ ಅಧಿಕಾರ ಶಾಹಿಯಲ್ಲಿ(Beauracrasy)ಬಹುಸಂಖ್ಯಾತರಾಗಿದ್ದಾರೆ. ಹೀಗಾಗಿ ಇವರಿಗೆ ಬಿದ್ದ ಪೆಟ್ಟು ಭೂಸುಧಾರಣೆಯನ್ನು ಸರಿಯಾದ ರೀತಿಯಲ್ಲಿ ಕಾರ್ಯಗತಮಾಡಲು ಇವರು ಸಹಕರಿಸದೆ ಹೋಗುವ ಮಟ್ಟಕ್ಕೆ ಇವರು ಕೊಂಡೊಯ್ಯಬಹುದಾದ ಉದಾಹರಣೆಗಳಿವೆ. ಭೂನ್ಯಾಯ ಮಂಡಳಿಗಳಲ್ಲಿ ನ್ಯಾಯತೀರ್ಮಾನಗಳು ಬಹುಮಟ್ಟಿಗೆ ಅಧಿಕಾರಶಾಹಿಯ ಕೈಯಲ್ಲಿರುತ್ತದೆ. ಯಾಕೆಂದರೆ ತೀರ್ಮಾನಕ್ಕೆ ಬೇಕಾದ ಎಲ್ಲಾ ರೆಕಾರ್ಡುಗಳನ್ನು ತಯಾರುಮಾಡುವವರು ಇವರಾಗಿರುತ್ತಾರೆ. ಇವರು ನಿಧಾನ ನೀತಿಯನ್ನು ಅನುಸರಿಸುವುದರಿಂದ, ತಮಗೆ ಬೇಕಾದವರ ಪರವಾಗಿ ರೆಕಾರ್ಡುಗಳನ್ನು ಸಿದ್ಧಪಡಿಸುವುದರಿಂದ, ಆಡಳಿತದ ಧೋರಣೆಗಳನ್ನು ಇವರು ಬುಡಮೇಲು ಮಾಡುತ್ತಾರೆ.

ಭೂನ್ಯಾಯ ಮಂಡಳಿಗಳು ಕೇವಲ ಇಂಥ ರೆಕಾರ್ಡುಗಳ ಆಧಾರದ ಮೇಲೆ ತೀರ್ಮಾನ ಕೊಡುವ ಅಂಗಗಳಾಗಿ ಬಿಟ್ಟಿರುವುದರಿಂದ ಅಧಿಕಾರಶಾಹಿಯ ಇಚ್ಛೆ ಹಿಡೇರಿದಂತಾಗುತ್ತದೆ. ಇಂಥ ಅನ್ಯಾಯಗಳಿಗೆ ಬಲಿಯಾಗಬಾರದೆಂದೇ ನಿಜವಾದ ಪ್ರತಿ ಪಾದನೆಗಾಗಿ ಸ್ಥಳಪರಿಶೀಲನೆನಡೆಸುವ ತಮ್ಮದೇ ವ್ಯವಸಾಯ ಕ್ಷೇತ್ರದ ಅನುಭವವಿರುವ ಸದಸ್ಯರನ್ನು ನೇಮಕ ಮಾಡುವ ಕ್ರಿಯೆಗಳು ಭೂನ್ಯಾಯ ಮಂಡಳಿಯ ಸ್ಥಾಪನೆಗೆ ಕಾರಣವಾಗಿದೆ. ಆದರೆ ಭೂನ್ಯಾಯ ಮಂಡಳಿಗಳು ಈ ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಅಥವಾ ತಮ್ಮ ಸ್ವಹಿತಾಸಕ್ತಿಗಳಿಗೆ ಬಳಸಿಕೊಂಡು ನ್ಯಾಯಕ್ಕೆ ಮು...

ಪರಿಹಾರಪಡೆದ ಜನಗಳ ಸಂಖ್ಯೆ 1.00300.18 ಇಷ್ಟೊಂದು ದೊಡ್ಡ ಮೊತ್ತದ ಹಣವನ್ನು ಖರ್ಚು ಮಾಡಿ ಸರ್ಕಾರ ಹಳ್ಳಿಗಾಡಿನ ಕಡೆ ಭೂಸಂಬಂಧಗಳಲ್ಲಿ ಗುಣಾತ್ಮಕ ಬದಲಾವಣೆಯನ್ನೇನಾದರೂ ತಂದಿದೆಯೇ ಅನ್ನುವುದು ಒಂದು ದೊಡ್ಡ ಪ್ರಶ್ನಾರ್ಥಕ ಚಿಹ್ನೆಯಾಗಿ ಉಳಿದುಕೊಳ್ಳುತ್ತದೆ.


7. Legislative Council Debates - 29-8-1974 - page 408
8. ಸುಧಾ - 20-12-1981
9. Shashikala S. Land Tribunels on Evaluation of their Performence in some Southern States - Southern Economist Vol. 21 Page 23 Oct 15-1982.
10. Indian Express - Articals Land Tribunals by Pushpa. G. Date 28-10-81
11. Politics of Land Tribunals by Lalitha Nataraj: EPW - Vol XV No. 26 June 28-1980.
12. ಜುಲೈ 15-1984 ರಂದು ಮೈಸೂರು ತಾಲ್ಲೂಕು ಭೂನ್ಯಾಯ ಮಂಡಳಿ ಸದಸ್ಯ ಜಯದೇವರಾಜ ಅರಸುಅವರೊಡನೆ ನಡೆದ ಸಂದರ್ಶನ.
13. Land System & Laws in Mysore State by P. T. George Arthavijnana 1970 Vol 12. No. 1 &2 Page 117-194.
14. The Mysore (personal & Miscellaneous) Inam Abolition Act 1954 - Chapter II (b)
15. ಉಂಡವಾಡಿಯ ರೈತರ ಜೊತೆ 15-1-82 ರಲ್ಲಿ ನಡೆಸಿದ ಸಂದರ್ಶನ.
16. ಜುಲೈ 6-1984 ರಂದು ಸಣ್ಣ ರೈತರ ಮೈಸೂರು ವಿಭಾಗದ ಕಾರ್ಯದರ್ಶಿಯವರೊಡನೆ ನಡೆಸಿದ ಸಂದರ್ಶನ.
17. Indian Express July 23-1980
18. Deccan Herald 18-8-1982.




**ಚಂದಾದಾರರಿಗೆ ಸೂಚನೆ :**

ಪ್ರತಿ ಸಂಚಿಕೆಯನ್ನು ತಪ್ಪದೆ ಎಚ್ಚರಿಕೆಯಿಂದ ಅಂಚೆಗೆ ಹಾಕುತ್ತಿದ್ದೇವೆ. ಇಷ್ಟಾಗಿಯ 'ಪಂಚಮ'ಪ್ರತಿಗಳು ತಮಗೆ ತಲುಪದಿದ್ದಲ್ಲಿ ದಯವಿಟ್ಟು ನಮಗೆ ಒಂದು ಕಾರ್ಡು ಹಾಕಿರಿ.

—ಸಂಪಾದಕ

# ಡಿ. ಕರಿಯಪ್ಪಗೌಡರ ಕರಿ ಮುಖಗಳು

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಹುಣಸೂರು ಶಾಖೆಯು ಸ್ಥಳೀಯ ರಾಜಕಾರಣಿ ಡಿ. ಕರಿಯಪ್ಪಗೌಡರ ಭ್ರಷ್ಟತೆ ಹಾಗೂ ದಲಿತ ಅಧಿಕಾರಿ ಶಿವರಾಂರವರಿಗೆ ನೀಡುತ್ತಿದ್ದ ಕಿರುಕುಳವನ್ನು ವಿರೋಧಿಸಿ ತಾ॥ 22-9-83ರಂದು ಬೃಹತ್ ಮೆರವಣಿಗೆ ನಡೆಸಿತ್ತು.

1972 ರಿಂದಲೂ ಹುಣಸೂರಿನ ಸರ್ಕಾರಿ ಕಟ್ಟಡದಲ್ಲಿ ಬಾಡಿಗೆಯನ್ನೂ ಕೊಡದೆ ಅಕ್ರಮವಾಗಿ ವಾಸಿಸುತ್ತಿದ್ದುದರ ವಿರುದ್ಧ 17-8-1983 ರಂದು ದಲಿತ ಅಧಿಕಾರಿ ಬಿ. ಡಿ. ಓ.ಶಿವರಾಂರವರು ಕಾನೂನು ರೀತ್ಯಾ ಕ್ರಮ ಕೈಗೊಂಡು ಖಾಲಿ ಮಾಡಿಸಲು ಮುಂದಾದಾಗ ದಕ್ಷಅಧಿಕಾರಿ ಶಿವರಾಂರ ಮೇಲೆ ಈತನ ಕೆಂಗಣ್ಣು ಬಿತ್ತು. ಇದನ್ನೇ ನಂತರ ವೈಯಕ್ತಿಕ ಪ್ರತಿಷ್ಠೆಯ ಪ್ರಶ್ನೆಯಾಗಿ ತೆಗೆದುಕೊಂಡ ಡಿ. ಕರಿಯಪ್ಪಗೌಡ ಹಾಗೂ ಈತನ ಇನ್ನೊಂದು ಮುಖವಾಗಿರುವ ಭಾವಮೈದ ಕಂಟ್ರಾಕ್ಟರ್ ನಾಗರಾಜೇಗೌಡ ತಾ॥ 12-9-83 ರಂದು ಬಿ. ಡಿ. ಓ. ಛೇಂಬರಿಗೆ ನುಗ್ಗಿ "ಹೊಲೆಯ ನನ್ಮಗನೆ ನೀನು ನಮ್ಮಂಥವರ ಮನೆಯಲ್ಲಿ ಜೀತಮಾಡಲಿಕ್ಕೆ ಲಾಯಕ್ಕು" ಮುಂತಾಗಿ ಬೈದು ಗಲಾಟೆ ಮಾಡಿದ್ದರು.

ಈ ಎಲ್ಲದರ ವಿರುದ್ಧ ಈತನ ಜಾತಿಯವರೇ ಆದ ಹೆಚ್. ಬಿ. ರಾಜು, ಯುವ ರಾಜಕಾರಣಿ ಮಳ್ಳಾಡಿ ನಾಗರಾಜ್, ಮಿತ್ರರು ಸಾರ್ವಜನಿಕರೆಲ್ಲ ಹಲವಾರು ಭಿತ್ತಿ ಪತ್ರಗಳನ್ನು ಹೊರತಂದು ಇಡೀ ತಾಲ್ಲೂಕಿನ ಜನತೆಯೆಲ್ಲ ಪ್ರತಿಭಟಿಸಿತ್ತು. ಈತ ಇನ್ನಾದರೂ ಕೀಳು ಮಟ್ಟದ ಕೊಳಕು ರಾಜಕೀಯ ಬಿಟ್ಟು ಪಾಠ ಕಲಿಯಬಹುದೆಂದು ಆಶಿಸಿದ್ದ ನನಗೆ ಈತನ ಭ್ರಷ್ಟತೆ ಮಿತಿಮೀರ ತೊಡಗಿ ಇಡೀ ತಾಲ್ಲೂಕಿನಲ್ಲಿ ಈತ ಕೆಲವು ಚೇಲಾಗಳೊಂದಿಗೆ ಮಿತಿಮೀರಿದ ಜನವಿರೋಧಿ ಚಟುವಟಿಕೆಗಳಲ್ಲಿ ಜನತೆಯನ್ನು ತಲ್ಲಣಗೊಳಿಸಿ, ಈತನ ಬಗ್ಗೆ ಬರೆಯಲು ಹಲವಾರು ಒತ್ತಾಯಗಳು ಬರತೊಡಗಿದಾಗ ಸಹಜವಾಗಿ ಡಿ. ಕರಿಯಪ್ಪಗೌಡರ ಬಗ್ಗೆ ಪ್ರಾಮಾಣಿಕವಾಗಿ ಅಧ್ಯಯನ ಮಾಡತೊಡಗಿದೆ. ಈತ ಭ್ರಷ್ಟತೆಯ ಮಹಾಪರ್ವತ. ಸ್ವಾರ್ಥಕ್ಕಾಗಿ ಈತ ಮಾಡಿರುವ ಪಾಪವು ಏಳು ಸಮುದ್ರದ ನೀರಿನಿಂದ ತೊಳೆದರೂ ಹೋಗಲಾರದಂತಹದ್ದು. ನಿಜಹೇಳಬೇಕೆಂದರೆ ಈತ ಜೈಲಿನಲ್ಲಿರಬೇಕಾದವನು.

ಒಬ್ಬ ಸಾಮಾನ್ಯ ಗುಮಾಸ್ತನಾಗಿದ್ದ ಡಿ. ಕರಿಯಪ್ಪಗೌಡ ನಂತರ ರಾಜಕೀಯರಂಗ ಪ್ರವೇಶಿಸಿ ಎಷ್ಟರಮಟ್ಟಿಗೆ ಹಣ ಅಧಿಕಾರ, ಹೆಸರುಮಾಡಿಕೊಳ್ಳಬಹುದೋ ಅದೆಲ್ಲವನ್ನೂ ಸಾಧಿಸಿದ್ದಾನೆ. ಈತನ ಭ್ರಷ್ಟತೆಯ ಕೆಲವೇ ಕೆಲವು ಸ್ಯಾಂಪಲ್‌ಗಳನ್ನಿಲ್ಲಿ ಕೊಡುತ್ತೇನೆ.

1) ಹುಣಸೂರು ತಾ॥ ಕಿರಂಗಾಜಿಯಲ್ಲಿ ಹಲವಾರು ದಲಿತರ 30ಎಕರೆಗಿಂತಲೂ ಹೆಚ್ಚು ಜಮೀನನ್ನು ಕಬಳಿಸಿ ದೊಡ್ಡ ತೆಂಗಿನ ತೋಟ ನಿರ್ಮಿಸಿಕೊಂಡು ಹುಣಸೂರು ಟೌನಿನಿಂದ ತನ್ನ ಮನೆತನಕ 2ಮೈಲಿ ಟಾರುರಸ್ತೆ ಮಾಡಿಸಿಕೊಂಡಿರುತ್ತಾನೆ.

2) ನಾಲ್ಕು ವರ್ಷಗಳಿಂದ ಟಿ. ಎ. ಪಿ. ಸಿ.ಎಂ. ಸೊಸೈಟಿಯ ಅಧ್ಯಕ್ಷನಾಗಿ ಸುಮಾರು 7,50,000 ರೂಗಳನ್ನು ಲಪಟಾಯಿಸಿದ್ದು ಒಂದು ವರ್ಷವೂ ಚುನಾವಣೆ ನಡೆಸದೆ, ತನ್ನ ಸುತ್ತಲೂ ಚೇಲಾಗಳ ದಂಡನ್ನೇ ನಿರ್ಮಿಸಿಕೊಂಡು ಸರ್ವಾಧಿಕಾರಿಯಾಗಿರುವ ಈತನದೇ ಇಲ್ಲಿ ಕಾರುಬಾರು.

3) ಕೆ. ಆರ್ ನಗರದ ಮಂಜುನಾಥ ರೈಸ್ ಮಿಲ್ಲಿನಲ್ಲಿ ಶೇಖರಿಸಿದ್ದ ಭತ್ತವನ್ನು ಫುಡ್ ಅಂಡ್ ಸಿವಿಲ್ ಸಪ್ಲೈ ಇಲಾಖಾ ಅಧಿಕಾರಿಗಳು ತಾ॥ 31-3-83ರಂದು ತನಿಖೆ ಮಾಡಿದಾಗ 1573 ಕ್ವಿಂಟಾಲ್ (ಅಂದಾಜು 3ಲಕ್ಷ)ಭತ್ತವು ಕಾಣೆಯಾಗಿರುವುದು ಸ್ಪಷ್ಟವಾಗಿರುತ್ತದೆ. (ಈ ಬಗ್ಗೆ ಬಡ ವಾಚ್‌ಮನ್ ಕಾಳೇಗೌಡ ಎಂಬುವನಿಗೆ ಕಳ್ಳತನ ಹೊರಿಸಲು ಪ್ರಯತ್ನಿಸಿರುತ್ತಾನೆ)

4) MYM5318 ಲಾರಿಯು ಈತನ ಸ್ವಂತದ್ದೆಂಬಂತೆ ಉಪಯೋಗವಾಗುತ್ತಿದ್ದು NMY 2427 ರ ಜೀಪು ಸರ್ಕಾರದ್ದಲ್ಲ ಎಂದು ಮುಗ್ಧ ಜನ ತಿಳಿದುಕೊಂಡಿರುತ್ತಾರೆ.

5) ಸೊಸೈಟಿಯ ಮಳಿಗೆ ಕಟ್ಟಿರುವ ನಾಟಕದಲ್ಲಿ ಕಟ್ಟಡ ಕುಸಿದು ಸುಮಾರು 2,50.000 ರೂಗಳನ್ನು ಲಾಸ್‌ಮಾಡಿ 1,50,000 ರೂ ದೋಚಿದ್ದಾನೆ.

6) ಸೊಸೈಟಿಯ ಲಾರಿಯೊಂದನ್ನು 68,000 ರೂಗಳಿಗೆ ಮಾರಿ ದಾಖಲಾತಿಯಲ್ಲಿ ಕೇವಲ 55000 ಮಾತ್ರ ದಾಖಲಿಸಿದ್ದು ಹಾಗೂ ಮಂಗಳರಲ್ಲಿ ಲಾರಿರಿಪೇರಿಗಾಗಿ 18000 ಖರ್ಚು ಮಾಡಿ ದಾಖಲೆಯಲ್ಲಿ 26000 ನಮೂದಿಸುವಲ್ಲಿ ಈತನ ಬಲಗೈ ವಾದಿರಾಜ ಭಟ್ಟನ ಕೈವಾಡವೂ ಸೇರಿರುತ್ತದೆ.

ಮಾಜಿ ಎಂ. ಎಲ್. ಎ. ಎಂ. ಸಿ. ಸಿ. ಮುಂತಾದ ಅಧಿಕಾರಗಳನ್ನೆಲ್ಲಾ ಅನುಭವಿಸಿ, ಅರಸು ಹೆಸರೇಳಿಕೊಂಡು ಮೇಲೆ ಬಂದು ನಂತರ ಡಿ॥ ದೇವರಾಜ ಅರಸುರವರ ಬೆನ್ನಿಗೆ ಚೂರಿಹಾಕಿದ ಈತ ಮೊನ್ನೆ ಮೊನ್ನೆವರೆಗೂ ಕಾಂಗ್ರೆಸ್ನಲ್ಲಿದ್ದು, ಚುನಾವಣೆಗೆ ನಾಲ್ಕು ದಿನವಿರುವಾಗ ಜನತಾಕ್ಕೆ ಹಾರಿಬಂದು ಇಲ್ಲಿ ಕೂಡ ತನ್ನ ಬೇಳೆ ಬೇಯಿಸಿಕೊಳ್ಳುತ್ತಿದ್ದಾನೆ. ಜನತೆಯು ಚಂದ್ರಪ್ರಭಾ ದೇವೇಗೌಡ, ಹೆಗಡೆ ಎಲ್ಲರಿಗೂ ಈತನ ಮೇಲೆ ದೂರುನೀಡಿ ತನಿಖೆ ಮಾಡಿಸಲು ಕಾಯುತ್ತಿದ್ದಾರೆ. ಜನತಾ ಸರ್ಕಾರವು ನಿದ್ದೆಮಾಡುತ್ತಾ ಮಲಗಿದೆ.

—ಸೋಗಳ್ಳಿ ನಿಂಗನಾಯಕ್

# ಮಂಡ್ಯದ ಹಸಿರು ದರ್ಪದೊಳಗೆ ದಲಿತ ಮಾಸ್ತರೊಬ್ಬರ ಹೋರಾಟ

ಮಂಡ್ಯ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಭತ್ತ, ಕಬ್ಬಿನ ಹಣ ಜೇಬು ಒತ್ತಿ ಕುಣಿದರೆ ನಾಗಮಂಗಲ ತಾಲ್ಲೂಕಿನ ಕೆಲವೆಡೆ ತೆಂಗಿನ ಹಾಗೂ ಸಣ್ಣ ನೀರಾವರಿಯ ಉಪಯೋಗದಿಂದಾದ ಭತ್ತ ಸ್ಥಳೀಯ ಒಕ್ಕಲಿಗರು ಕುಣಿವಂತೆ ಕುಮ್ಮಕ್ಕು ಮಾಡಿದೆ. ಹೀಗಾಗಿ ನಾಗಮಂಗಲ ತಾಲ್ಲೂಕಿನ ಆಳಿಸಂದ್ರ ಗ್ರಾಮದ ಒಕ್ಕಲಿಗರ ಪೊಗರು ಬೆಳೆಸಿ ತೊಣಚಲಿಕ್ಕಿದಂತಾಗಿದೆ ಎಂಬುದನ್ನ ಆ ಗ್ರಾಮದ ಒಕ್ಕಲಿಗರ 'ಹಳದಿ ನ್ಯಾಯ-ಪಂಚಾಯಿತಿ' ರುಜುವಾತು ಮಾಡಿದೆ ಎನಿಸುತ್ತದೆ. ಇದಕ್ಕೆ ತುತ್ತಾದ ಹರಿಜನ ನಿವೃತ್ತ ಪ್ರಾಥಮಿಕ ಶಾಲಾ ಶಿಕ್ಷಕರ ಮನೆಯ ಕಥೆ ಇಲ್ಲಿದೆ.

ಆಳಿಸಂದ್ರ ಬೆಳ್ಳೂರು ಹೋಬಳಿ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆಗೆ ಸೇರಿದ ತೆಂಗು, ಭತ್ತ ಮತ್ತೆ ಹೊಲದ ಕೃ ಷಿ ಕ ರಿ ರು ವ ಗ್ರಾಮ. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಒಕ್ಕಲಿಗರು ಒಂದಿಬ್ಬರು ಪೂಜಾರರು, ಎರಡು-ಮೂರು ಲಿಂಗಾಯಿತ ಕುಟುಂಬ. ಗಾಣಿಗರು, ಮಡಿವಾಳರು, ಎಳೆಂಟು ಕುಟುಂಬ ಹರಿಜನರು ಇದ್ದಾರೆ. ಪಕ್ಕ ಯರಗನಹಳ್ಳಿಯ ಕೆರೆಯ ನೀರುಂಡು ಬೆಳೆದ ತೆಂಗು, ಭತ್ತವ ಹಣ ವರ್ಷಕ್ಕೆ ಎರಡು ಬಾರಿ ಅಲ್ಲಿನ ಬಹುಸಂಖ್ಯೆ ಒಕ್ಕಲಿಗರ ಜೇಬು, ಮನೆಯ ತಿಜೋರಿ ತುಂಬುತ್ತದೆ. ಹೀಗಾಗಿ ಮನೆ ಮಾರು ಎತ್ತರ, ಅಗಲವಾಗಿ ಸರ್ವ ವಿಧದ ಅನುಕೂಲವನ್ನು ಹೊಂದಿದೆ. ಆಳಿಸಂದ್ರದ ಪಂಚಾಯತಿಯಲ್ಲಿರುವ ಎಲ್ಲರೂ ಬಹುತೇಕ ಒಕ್ಕಲಿಗ (ಗೌಡ) ಜಾತಿಯವರೇ ಎಂದರೆ ಆಶ್ಚರ್ಯಪಡಬೇಡಿ.

ಹರಿಜನರ ನಿವೃತ್ತ ಶಾಲಾ ಶಿಕ್ಷಕ ಚುಂಚನಗಿರಿಯಪ್ಪ ಇತ್ತೀಚಿನ ಎರಡು ಮೂರು ವರ್ಷಗಳಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು. ಮಾಸ್ತರರು ಸಾಕಷ್ಟು ತಮ್ಮ ಸೇವೆಯನ್ನು ತಾಲ್ಲೂಕಿನ ಹೊರಗೆ ಕಳೆದಿರುವುದರಿಂದ ಅವರ ಹೆಂಡತಿ ಗೌರಮ್ಮ ಸಹ ಅವರೊಟ್ಟಿಗೆ ಬಾಳಿ ಬಂದರು. ಗೌರಮ್ಮ ವಿದ್ಯಾವಂತೆಯಲ್ಲದರೂ ಹೊಸ ಬದುಕಿನ ಪ್ರಜ್ಞೆ ಹೊತ್ತ ಹೆಂಗಸು, ಅನ್ಯಾಯವನ್ನು ಒಪ್ಪದ, ಶೋಷಣೆ, ದಬ್ಬಾಳಿಕೆಗಳನ್ನು ಪ್ರತಿಭಟಿಸುವ ಮಹಿಳೆ. ಇದು ಇಲ್ಲಿನ 'ಹಳದಿ ನ್ಯಾಯ' ಹೇಳುವ ಪಂಚಾಯತಿಯ ಒಕ್ಕಲಿಗರಿಗೆ, ಸಾಲದ್ದಕ್ಕೆ ನ್ಯಾಯಶಾಸ್ತ್ರ ಕಲಿತು ನಾಗಮಂಗಲದಲ್ಲಿ ವಕೀಲಿತನ ಮಾಡುವ ಪೂಟಲಾಯರಿ ಕೃಷ್ಣಪ್ಪ ಮುಂತಾದವರ ತಿಕಕ್ಕೆ ಮುಳ್ಳು ಚುಚ್ಚಿ ನೋವುಂಟುಮಾಡಿದಂತಾಗಿದೆ.

### 'ಸಮಸ್ಯೆ ತಂದಿತು ತಮಟೆ'

ಈ ದೇಶದ ಎಲ್ಲಾ ಹಳ್ಳಿಯಲ್ಲಿ ಬೆಳೆದು ಬಂದಿರುವ 'ಗ್ರಾಮದ ಕೆಲಸ' ಅಂದರೆ ಊರಲ್ಲಿ ತಮಟೆ ಬಡಿಯುವುದು; ತಳವಾರಿಕೆ; ಸತ್ತವನ ಹೊಳುವುದು ಪದ್ಧತಿಯಾಗೇ ಬಂದು ಗ್ರಾಮಾಂತರದ ಬಹುಸಂಖಿಗಳನ್ನು ಕೊಬ್ಬಿಸಿದೆ. ಇಂಥ ಶೋಷಣೆಯೇ ಆಳಿಸಂದ್ರದ ಗ್ರಾಮ ಪಂಚಾಯಿತಿಯವರ ಗ್ರಾಮೋದಯ, ಗ್ರಾಮೋದ್ಧಾರ ಕಾರ್ಯ ಎನಿಸಿದೆ. ಚುಂಚನಗಿರಿಯಪ್ಪ ಮಾಸ್ತರಿಕೆ ಹಿಡಿದ ಮೇಲೆ 'ಗ್ರಾಮದ ಕೆಲಸ' ಬಿಟ್ಟರು. ಅಲ್ಲಿನ ಅವಿದ್ಯಾವಂತ ಹರಿಜನರು ಈಗಲೂ ಇಂಥ ದಬ್ಬಾಳಿಕೆಯ ನೊಗ ಹೊತ್ತು ಇಂದೂ ಎಳೆದು ಬಿಸಾಕದೆ ಮುಕ್ಕರಿಯುತ್ತಿರುವುದು ವಿಷಾದದ ಸಂಗತಿ.

### ಪರಮಶಿವ ನಡುಬೆಟ್ಟ

ಚುಂಚನಗಿರಿಯಪ್ಪನವರ ಹಿರಿಯ ಹೆಂಡತಿ; ಹಿರಿಯ ಮಗ ಮುಂತಾದ ಕುಟುಂಬದವರು ವ್ಯವಸಾಯವನ್ನು ನೆಮ್ಮಿ ಕುಳಿತು; ಒಕ್ಕಲಿಗರ ದಬ್ಬಾಳಿಕೆಯನ್ನು ಸಹಿಸುತ್ತಲೇ ಬಂದವರು. ಆದರೆ ನಾಲ್ಕಾರು ಪೇಟೆ ಪ್ರದೇಶದಲ್ಲಿ ವಾಸಿಸಿ; ಹೊಸ ಬದುಕಿನ ಚಿಂತನೆಯನ್ನು ರೂಢಿಸಿಕೊಂಡ ಗೌರಮ್ಮ ಆಗ್ಗೊಮ್ಮೆ-ಈಗೊಮ್ಮೆ ಹಳ್ಳಿಗೆ ಬರುವುದು, ಕೆಲವು ದಿನ ಇದ್ದು ಶಾಲೆ ಆರಂಭವಾದಮೇಲೆ ಹೊರಡುವುದು-ಒಕ್ಕಲಿಗರ ಬೆದರಿಕೆಗೆ ಸೊಪ್ಪು ಹಾಕದಂತಾದಳು.

ಮಾಸ್ತರರ ಮಗ ಗ್ರಾಮದ ಕೆಲಸ ಎನಿಸಿದ ತಮಟೆ ಬಡಿಯುವುದು; ಪಂಚಾಯಿತಿ ಸೇರಿಸಲು ಸಾರುವುದು ಇನ್ನಿತರ ತಳವಾರಿಕೆಯಲ್ಲಿ ಮುಂದುವರೆದುಬಂದಂತೆ ಊರ ಆಸ್ತಿ 'ತಮಟೆ' ಯೂ ಮನೆಯನ್ನು ಸೇರಿತು.

### ತಮಟೆ ಮತ್ತು ಹಳದಿ ಪಂಚಾಯಿತಿ

ಊರ ಒಕ್ಕಲಿಗರ ಮುಂದೆ ಗೌರಮ್ಮ ಒಳ್ಳೆಯ ಬಟ್ಟೆ, ಕಾಲಿಗೆ ಚಪ್ಪಲಿ ಹಾಕಿ ತಿರುಗಾಡುವುದು ಕಣ್ಣು ಕುಕ್ಕುವಂತಾಯಿತು. ಮಾಸ್ತರರ ನಿವೃತ್ತಿಯ ನಂತರ ಆಳಿಸಂದ್ರ ಸೇರಿದ ಗೌರಮ್ಮ ತನ್ನ ಮನೆಯವರು, ಮಕ್ಕಳು ಹಿಂದಿನ ತೋಟಿ. ತಳವಾರಿಕೆಯನ್ನು ಮಾಡದಂತೆ ಕಾಳಜಿ ವಹಿಸಿದಳು. ಗೌಡರ ಕಣ್ಣು ಕೆಂಪು ಹತ್ತಿದಂತೆ 'ಚುಂಚನಗಿರಿ ಊರ ಕೆಲಸ ಮಾಡಲ್ವೇನಯ್ಯ' ಎಂದರು. ಪ್ರಾಣಿಗಳಿಗೂ ಆತ್ಮಗೌರವ ಇರುತ್ತದೆ ಎಂಬುದನ್ನು ಕಿಂಚಿತ್ತು ಅರಿಯದ ನಾಯಿಗಳು, "ನಾನು ಸರ್ಕಾರಿ ಕೆಲಸ ಹಿಡಿದಂದಿನಿಂದ ಬಿಟ್ಟಿದ್ದೀನಿ ಈಗೇಕೆ ಮಾಡಲಿ" ಎಂದರು. ಇವರ ಹೆಂಡತಿಯ ಕುಮ್ಮಕ್ಕು ಇದ್ದಿರಬೇಕೆಂದು 'ಹಾಗಿದ್ದರೆ ತಮಟೆ ತಂದು ಕೊಡು. ಇಲ್ಲ ನಿನ್ನ ಮಕ್ಕಳನ್ನಾದರೂ ಮಾಡಲು ಹೇಳು,' ಎಂದರು. ಇದೂ ಆಗಲಿಲ್ಲ. 1983 ಊರ ಕೋಡಿ ಮಾರಮ್ಮನ ಹಬ್ಬದ ಸಮಯದಲ್ಲಿ ಸಮಸ್ಯೆ ಬೆಳೆಯಿತು.

ಒಕ್ಕಲಿಗರೇ ತುಂಬಿರುವ ಪಂಚಾಯತಿಯಲ್ಲಿ ಇಲಿ ಕೆರೆದು ತೂತಾಗದ ತಮಟೆ ಅಂದು ತೂತಾಯಿತು. ಊರ ಕೆಲಸ ಮಾಡಲು ಒಪ್ಪದ ನೀನು ತಮಟೆಯನ್ನು ತೂತು ಮಾಡಿರುವೆ ಎಂದು ದಂಡ ವಿಧಿಸಿದರು. ದಲಿತರಿಗೆ ಯಾರ ನೆರವು ಸಿಗುವುದಿಲ್ಲ. ದಂಡ ಹಾಕುವುದೇ ಊರನ್ಯಾಯ ಪಂಚಾಯಿತಿ. ಹೀಗೆಂದೇ ನೂರ ಇಪ್ಪತ್ತೈದು ರೂಪಾಯಿ ದಂಡ ತೆರುವಂತೆ ಒತ್ತಾಯ. ಗೌರಮ್ಮ ಪ್ರತಿಭಟಿಸಿದರು. ಹಣಇಲ್ಲದೆ ಕೈಯಲ್ಲಿದ್ದ ಗಡಿಯಾರವನ್ನೇ ಪಂಚಾಯಿತಿಗೆ ಗಿರಿವಿಟ್ಟಂತೆ ಕೊಟ್ಟು ಬಂದು ನಂತರ ಹಣ ಕಟ್ಟಿ ಬಿಡಿಸಿಕೊಂಡರು.

### 'ಪಂಕ್ತಿ ಊಟದ ಕಟ್ಟು ಕತೆ'

ಊರ ಒಕ್ಕಲಿಗರ ಮನೆಯಲ್ಲಿ ಮದುವೆ, ಅಲ್ಲಿಯೇ ಪಂಕ್ತಿಯಲ್ಲಿ ಹೊಲೆಯರ ಗೌರಮ್ಮ ಊಟ ಮಾಡಿದಳು. ಇದರಿಂದ ನಾಯಿ-ಕರ ಜಾತಿಕೆಟ್ಟು ಹೋಯಿತೆಂಬ ಕಟ್ಟುಕತೆ ಸೃಷ್ಟಿಸಿದರು, ಒಕ್ಕಲಿಗರ ಕುಳ್ಳನ ಮಗ ಬೋರೆಗೌಡ, ಅಂಚೇರ ಚಿಕ್ಕಣ್ಣ, ಸುಬ್ಬೇಗೌಡರ ಮಗ ಚನ್ನಬಸವ, ನಂಜುಂಡನ ಮಗ ಶಿವಣ್ಣ ಸುಳ್ಳು ಸಾಕ್ಷಿ ನುಡಿದರು. ಇಷ್ಟಲ್ಲದೆ ಹರಿಜನರ ಬೀದಿಯವರನ್ನು ಬೆಟರಿ ಬೋರಯ್ಯ, ನಂಜುಂಡಯ್ಯ, ಶಿವಲಿಂಗಯ್ಯ, ಗೋವಿಂದಯ್ಯ ಮುಂತಾದವರಿಂದ ಸುಳ್ಳು ಸಾಕ್ಷಿ ಹೇಳಿಸಿದರು. ಹೀಗಾಗಿ ಪೂಟಲಾಯರು ಕೃಷ್ಣಪ್ಪ, ಮೇಸ್ತ್ರೀವರ ಲಿಂಗಯ್ಯ, ಮೇಸ್ತ್ರಿ ಅಪ್ಪಣ್ಣ ಇದ್ದು ಹಲವಾರು ಮಂದಿ ಪೀತ ಪಂಚಾಯಿತಿ ಮಾಡಿ 200 ರೂಪಾಯಿ ದಂಡತೆರಬೇಕೆಂದು ಕಟ್ಟಾಜ್ಞೆ ವಿಧಿಸಿದರು.

ಮಾಸ್ತರರು ಒಪ್ಪಲಿಲ್ಲ. ಇಂಥ ಬೆದರಿಕೆ ದಲಿತರನ್ನ ಒಡೆದು ಬದುಕುವ ಒಕ್ಕಲಿಗರ ಕುತಂತ್ರವಾಗಿದೆ.

### ಪೋಲಿಸರಿಗೆ ದೂರು

ಮೇಲಿಂದ ಮೇಲೆ ಪಂಚಾಯಿತಿ ಸೇರಿ ದಂಡ ಹಾಕುವ ಊರ ಮೂರ್ಖ ಒಕ್ಕಲಿಗರಿಗೆ ಬುದ್ಧಿ ಕಲಿಸಬೇಕೆಂದು ಬೆಳ್ಳೂರ ಆರಕ್ಷಕ ಠಾಣೆಗೆ 1983ರ ಜೂನ್ ತಿಂಗಳಲ್ಲಿ ದೂರು ಸಲ್ಲಿಸಿದರು ಮಾಸ್ತರು ಮತ್ತು ಗೌರಮ್ಮ. ದೂರು ಪಡೆದ ಪೋಲಿಸರು ಆಳಿಸಂದ್ರಕ್ಕೆ ಬಂದವರು ಕೆಲವರನ್ನು ಕರೆದೊಯ್ದರು. ಕೆಲವರು ನಾಗಮಂಗಲ, ಹೊನ್ನೇನಹಳ್ಳಿ, ಕಡೆ ದೌಡಾಯಿಸಿ ಹೆಚ್. ಟಿ. ಕೃಷ್ಣಪ್ಪ, ಬಿ. ಟಿ. ತಿಮ್ಮಪ್ಪ ಇಂಥ ರಾಜಕಾರಣಿಗಳ ಮೊರೆ ಹೊಕ್ಕರು. ರಾಜಕಾರಣಿಗಳು ರಾಜಿ ಮಾಡಿಸಿದ್ದಲ್ಲದೆ ಹರಿ, ಜನರೊಬ್ಬರು ಹೀಗೆ ಮಾಡಿದ್ದು ಸರಿಯಲ್ಲ ದೂರು ಏನಿದ್ದರೂ ಊರಲ್ಲೆ ಇತ್ಯರ್ಥವಾಗಬೇಕು ಮುಂದೆ ಹೀಗೆಲ್ಲ ಮಾಡಬೇಡಿ ಎಂದರು. ಇಷ್ಟಕ್ಕೆ ನಿಲ್ಲಲಿಲ್ಲ. ನಾಯಿಬಾಲ ಡೊಂಕಲ್ಲವೆ. ದಲಿತರ ಹಣ ತಿಂದು ಬದುಕುವ ದಾರಿ ಕಂಡುಕೊಂಡವರಲ್ಲವೆ ? ಮತ್ತೆ ಪಂಚಾಯಿತಿ ಸೇರಿದರು ಎರಡು ತಿಂಗಳ ನಂತರ. ಪಕ್ಕದ ಹಳ್ಳಿಯಿಂದ ತಿಮ್ಮೇಗೌಡರೂ ಪಂಚಾಯಿತಿಗೆ ಬಂದರು. ಯಥಾ ಪ್ರಕಾರ ತಪ್ಪು ಹೊರಿಸಿ 25ರೂ ದಂಡ. ಇಂಥ ಪೀತನ್ಯಾಯಗಳು ಆ ಸುತ್ತಲ ಹರಿಜನರನ್ನು ಹಿಂಸಿಸದೇ ಬಿಟ್ಟಿಲ್ಲ. ಮಾಸ್ತರರು ದಂಡತೆರುವುದನ್ನು ವಿರೋಧಿಸಿದರು.

### 'ಗದ್ದೆಗೆ ನೀರಿಲ್ಲ'

ಪಕ್ಕದ ಹಳ್ಳಿ ಯರಗನಹಳ್ಳಿ ಕೆರೆಯ ನೀರುಂಡು ಆಳಿಸಂದ್ರ ಮತ್ತಿತರ ಗ್ರಾಮಗಳು ಹಸಿರು ಮೈ ತುಂಬಿಕೊಳ್ಳುತ್ತವೆ. ವರ್ಷದಲ್ಲಿ ಎರಡೆರಡು ಫಸಲಾಗಿ ಒಕ್ಕಲಿಗರ ಕೊಬ್ಬಚ್ಚಲು ಅನುಕೂಲ ಮಾಡಿದೆ ಕೆರೆ. ಮಾಸ್ತರರ ಗದ್ದೆಗೂ ಒಕ್ಕಲಿಗರ ಗದ್ದೆಯ ಮೂಲಕವಾಗಿಯೇ ನೀರು ಹರಿದು ಬರಬೇಕು. ಈ ಸಾರಿ ದಂಡ ತೆರದ ಚುಂಚನಗಿರಿಯಪ್ಪನವರ ಗದ್ದೆ ನೀರಿನ ಹೊರತಾಯಿತು. ಕೊನೆಗೆ ಮಾಸ್ತರರು ಪೂಜಾರಪ್ಪ ಎಂಬುವವರನ್ನು ಕೇಳಿ ವಾರಕ್ಕೆ ಮಾಡಿಕೊಳ್ಳಿ ಎಂದರು, ಮೊದಲು ಒಪ್ಪಿದ ಪೂಜಾರಪ್ಪ ಒಂದೆರಡು ದಿನದಲ್ಲೆ ಬೆದರಿಕೆಗೆ ಒಳಗಾಗಿ ವಾರಕ್ಕೆ ಗದ್ದೆ ಮಾಡಲಾರೆ ಎಂದರು. ಮತ್ತೊಬ್ಬ ತಟಸ್ಥ ಒಕ್ಕಲಿಗನನ್ನು ವಿಚಾರಿಸಿ ಒಪ್ಪಿಸಿದರು. ಅವರಿಗೂ ಜಾತಿಯವರು ವಾರಕ್ಕೆ ಗದ್ದೆ ಮಾಡಿದರೆ ನೀವೇ ದಂಡ ಕೊಡಬೇಕಾಗುತ್ತದೆಂಬ ಬೆದರಿಕೆ ಹಾಕಿದರು.

### 'ಚಿಂತೆ ಆರೋಗ್ಯ ಕೆಟ್ಟಿತು'

ಇಂಥ ಶೋಷಣೆಯಲ್ಲಿ ಬಸವಳಿದು ನಿಂತ ಗೌರಮ್ಮನಿಗೆ ಆರೋಗ್ಯ ಕೆಟ್ಟಿತು. ಬೆಳ್ಳೂರು, ಮೈಸೂರು ಮುಂತಾದೆಡೆ ವೈದ್ಯರಲ್ಲಿ ತೋರಿಸಿ ಫಲಕಾಣದೆ ಕೆಮ್ಮಣ್ಣುಗುಂಡಿಯ ತಣಿಗೆಬೈಲ್ ನಲ್ಲಿ ಮಾಸ್ತರಿಕೆ ಮಾಡುವ ಮತ್ತೊಬ್ಬ ಹಿರಿಯ ಮಗ ಮರಿಯಪ್ಪನಲ್ಲಿಗೆ ಹೋದರು. ಭದ್ರಾವತಿಯಲ್ಲಿ ಚಿಕಿತ್ಸೆ ಪಡೆದು ಆರೋಗ್ಯ ಸುಧಾರಿಸುತ್ತಿದ್ದಂತೆ ಮಗನ ಮೂಲಕ ಚಿಕ್ಕಮಗಳೂರಿನ ದಲಿತ ಸಂಘರ್ಷ ಸಮಿತಿಯ ಕಾರ್ಯಕರ್ತರನ್ನು ಕಂಡರು.

### ದ.ಸಂ.ಸ.ದವರು ನೀಡಿದ ಎಚ್ಚರಿಕೆ

ಊರ ಕೋಡಿ ಮಾರಮ್ಮನ ಹಬ್ಬ ಒಂದೆರಡು ದಿನ ಎನ್ನುತ್ತಿದ್ದಂತೆ ಗೌರಮ್ಮ ಊರು ಸೇರಿದರು. ಮತ್ತೆ ಒಕ್ಕಲಿಗರು ಮಾಸ್ತರರನ್ನು ತಮಟೆ ಬಡಿಯಲು ಕೇಳಿದರು. ನಿರಾಕರಿಸಿದ್ದರಿಂದ ಊರ ಕೆಲಸ ಮಾಡದ ನಿಮಗೆ ಊರ ಒಟ್ಟಿನ ನೀರು ಗದ್ದೆಗೆ ಹೇಗೆ ಬರುತ್ತದೆ ಎಂದರು. ಮಕ್ಕಳನ್ನಾದರೂ ಕಳಿಸುವಂತೆ ಕೇಳಿದ್ದೂ ನಿಷ್ಪ್ರಯೋಜನವಾಯಿತು. ಇಷ್ಟರಲ್ಲಿ ಚಿಕ್ಕಮಗಳೂರಿನ ದಲಿತ ಸಂಘರ್ಷ ಸಮಿತಿಯವರಿಂದ 'ನೋಟಿಸು' ಬಂದಿದೆ ಎಂಬುದು ಒಕ್ಕಲಿಗರ ಬಾಯಲ್ಲಿ ಬಂದು (ದ.ಸಂ.ಸ.) ಅವರು ಇದೇ ರೀತಿ ದಲಿತರನ್ನೂ ಶೋಷಣೆ ಮಾಡುವುದು ಮುಂದುವರೆದರೆ ಇದಕ್ಕೆ ಒಳಗಾದ ಒಕ್ಕಲಿಗರು ಜೈಲು ನೋಡಬೇಕಾದೀತು ? ಪತ್ರಿಕೆಗಳಲ್ಲಿ ಪೋಟೋ ಹಾಕಿಸಿ ಕಾನೂನಿನ ಕ್ರಮ ತೆಗೆದು ಕೊಳ್ಳಬೇಕಾದೀತು ಎಂದು ಎಚ್ಚರಿಕೆ ನೀಡಿರುವುದು ತಿಳಿದು ಬಂದಿದೆ. ಇದು ಆಳಿಸಂದ್ರದ ಒಕ್ಕಲಿಗರಿಗೆ ಚುರುಕು ಮುಟ್ಟಿಸಿದೆ.

# ಜನರ ಕಷ್ಟ ಕಾಯಿಲೆಗಳಿಗೆ ಮಿಡಿವ ಸಂಘರ್ಷ ಸಮಿತಿ

ಮಂಡ್ಯ ಜಿಲ್ಲೆ ದಲಿತ ಸಂಘರ್ಷ ಸಮಿತಿ ಶಾಖೆಯು ಏಪ್ರಿಲ್ 15 ರಂದು ಮಳವಳ್ಳಿ ತಾಲ್ಲೂಕು ಕೇಂದ್ರದಲ್ಲಿ ಆಚರಿಸಿದ ಅಂಬೇಡ್ಕರ್ ಜನ್ಮದಿನವು ತುಂಬ ವಿಭಿನ್ನವಾಗಿತ್ತು.

ಕರ್ನಾಟಕದ ಪ್ರಸಿದ್ಧ ವೈದ್ಯರಿಂದ ಒಂದು ದಿನದ ಉಚಿತ ಆರೋಗ್ಯ ತಪಾಸಣಾ ಶಿಬಿರವನ್ನು ಇಲ್ಲಿನ ಸರ್ಕಾರಿ ಬಾಲಕಿಯರ ವಿದ್ಯಾರ್ಥಿನಿಲಯದಲ್ಲಿ ಏರ್ಪಡಿಸಿತ್ತು. ಸುಮಾರು 838 ಜನ ರೋಗಿಗಳು ಸದರಿ ಆರೋಗ್ಯ ಶಿಬಿರದ ಪ್ರಯೋಜನ ಪಡೆದರು ಮತ್ತು ನೂರೈವತ್ತು ಮಕ್ಕಳಿಗೆ ಬಿ. ಸಿ. ಜಿ. ಹಾಕಿಸಲಾಯಿತು.

ಶಿಬಿರವು ಯಶಸ್ವಿಯಾಗಲು ದುಡಿದ ವೈದ್ಯರುಗಳ ಹೆಸರು ಇಂತಿದೆ.

1. ಡಾ॥ ಎಂ. ಎಲ್. ಸಿದ್ದರಾಜು. ಕೆ. ಎಂ. ಸಿ. ಹುಬ್ಬಳ್ಳಿ
2. ಡಾ॥ ಶಿವಸ್ವಾಮಿ, ಸರ್ಜನ್ ಮಂಡ್ಯ
3. ಡಾ॥ ಶಂಕರಗೌಡ, ಫಿಜಿಯಷನ್ ಮಂಡ್ಯ
4. ಡಾ॥ ಸಿ. ಮಹದೇವಯ್ಯ, ಮಂಡ್ಯ
5. ಡಾ॥ ಸಿ. ಚೌಡಯ್ಯ, ಕಾಡುಕೊತ್ತನಹಳ್ಳಿ
6. ಡಾ॥ ಸಿ. ರಘು, ಶೆಟ್ಟಿಹಳ್ಳಿ
7. ಡಾ॥ ಕುಮಾರಸ್ವಾಮಿ, ಮಂಡ್ಯ
8. ಡಾ॥ ರಾಜಶೇಖರ್, ಮಳವಳ್ಳಿ

ದಲಿತ ಸಂಘರ್ಷ ಸಮಿತಿಯು ರೋಗಿಗಳಿಗೆ ಉಚಿತ ಹಾಲು ಹಣ್ಣು ಬ್ರೆಡ್ಡುಗಳನ್ನು ಹಂಚಿತು. ಮತ್ತು ಇತರ ಸ್ಥಳೀಯ ಸಂಘ ಸಂಸ್ಥೆಗಳು ಕೂಡಾ ಇದೇ ಶಿಬರದ ರೋಗಿಗಳಿಗೆ ಹಣ್ಣು ಜ್ಯೂಸ್ ಇತ್ಯಾದಿಗಳನ್ನು ಹಂಚಿದರು.

ಸಂಜೆಯ ಕಾರ್ಯಕ್ರಮದಲ್ಲಿ ದಲಿತ ಕಲಾಮಂಡಳಿ ವತಿಯಿಂದ "ಪತ್ರೆ ಸಂಗಪ್ಪನ ಕಗ್ಗೊಲೆ" ಬೀದಿ ನಾಟಕವನ್ನು ಪ್ರದರ್ಶಿಸಲಾಯಿತು. ಕೊನೆಯಲ್ಲಿ ಕ್ರಾಂತಿಗೀತೆಯೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

ಕರ್ನಾಟಕ ದಲಿತ ಸಂಘರ್ಷಸಮಿತಿ ಜನಗಳ ಹತ್ತಿರ ಹೋಗಿ ಅವರ ಅಜ್ಞಾನ ಮತ್ತು ಬಡತನಗಳಿಗೆ ಕಾರಣವೇನು ಎಂದು ಜನರು ಯೋಚಿಸುವಂತೆ ಮಾಡುತ್ತಿದೆ ಮಾತ್ರವಲ್ಲ ಅವರ ಆರೋಗ್ಯ ಕಷ್ಟ ಕಾಯಿಲೆಗಳನ್ನೂ ತೊಲಗಿಸಲು ಈ ವೈದ್ಯಕೀಯ ಶಿಬಿರದಂಥ ರಚನಾತ್ಮಕ ಕಾರ್ಯದಲ್ಲಿಯೂ ಕೂಡಾ ತೊಡಗಿದೆ. ಈ ದಿಕ್ಕಿನಲ್ಲಿ ಪುಟ್ಟ ಹೆಜ್ಜೆಯಿಡುತ್ತಿರುವ ಮಂಡ್ಯ ಜಿಲ್ಲಾ ದ.ಸಂ.ಸ. ಇಡೀ ಕರ್ನಾಟಕಕ್ಕೆ ಮಾದರಿಯಾಗಿದೆ ಅನ್ನಲು ಅಡ್ಡಿಯಿಲ್ಲ.

—ಮುಳ್ಳೂರು ನಾಗರಾಜು

# ಕಾಂಗ್ರೈ ಕುತಂತ್ರಕ್ಕೆ ಬಲಿಯಾದ ಅಸ್ಪೃಶ್ಯರ ಸಮ್ಮೇಳನ

ಕಳೆದ ಏಪ್ರಿಲ್ 14-15ರಂದು ಮೈಸೂರಲ್ಲಿ ನಡೆದ ಅಸ್ಪೃಶ್ಯ ಜನಾಂಗ ಜಾಗೃತಿ ಸಮಿತಿಯ ಎರಡು ದಿನಗಳ ಸಮ್ಮೇಳನಕ್ಕೆ ಹೋಗಿದ್ದೆ. ಹಲವಾರು ಭಾರೀ ನಿರೀಕ್ಷೆಗಳನ್ನಿಟ್ಟುಕೊಂಡಿದ್ದ ನನಗೆ ಅವರ ಕಾರ್ಯಕ್ರಮಗಳ ಪಟ್ಟಿಯನೋಡಿ ದಂಗುಬಡಿದಂತಾಯಿತು. ಇದನ್ನು "ಇಂದಿರಾ ಕಾಂಗ್ರೆಸ್ ಮೇಳವೆಂದರೂ ಅಥವಾ ಮತಿಗೆಟ್ಟ ಮುಂದುಕರ ಮೇಳ"ವೆಂದರೂ ಸರಿಹೊಂದುತ್ತದೆ. 1932ರ ಪೂನಾಒಪ್ಪಂದ, 1950ರನಂತರ ಭಾರತ ರಾಜ್ಯಾಂಗದ ಪ್ರಕಾರ ಅಸ್ಪೃಶ್ಯರ ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳ ವಿಶ್ಲೇಷಣೆ, ಅಸ್ಪೃಶ್ಯತಾ ನಿವಾರಣೆಗೆ ಅಸ್ಪೃಶ್ಯರು ಅನುಸರಿಸಬೇಕಾದ ಮಾರ್ಗಗಳು, ಅಸ್ಪೃಶ್ಯರ ಮತಾವಲಂಬನೆ ಪ್ರಶ್ನೆ ಮುಂತಾದ ಅಸ್ಪೃಶ್ಯರ ಪರವಾದ ಕೆಲ ಮೂಲಭೂತ ಸಮಸ್ಯೆಗಳ ಬಗ್ಗೆ-ಚರ್ಚಿಸುವುದಾಗಿ ರಂಗುರಂಗಿನ ಸ್ಲೋಗನ್ನು ಹಾಕಿದ್ದ ಸಮಿತಿಯ ಮುಖಂಡರು ಸಮ್ಮೇಳನದಲ್ಲಿ ಕೇವಲ ಕೋತಿಗಳಾದದ್ದು ಈ ದೇಶದ ಅಸ್ಪೃಶ್ಯರ ದುರಂತ ಕೂಡ!

ಸ್ವಾತಂತ್ರ್ಯೋತ್ತರ 36ವರ್ಷಗಳನ್ನು ಕಳೆದಿರುವ ಇಂಡಿಯಾವು ಅಸ್ಪೃಶ್ಯರನ್ನ ಇಂದೂ ಅಸ್ಪೃಶ್ಯತೆಯಲ್ಲಿಟ್ಟಿರುವ ಬಗ್ಗೆ-ಏನೊಂದೂ ಅರಿವಿಲ್ಲದ "ಅ.ಜ.ಜಾ. ಸಮಿತಿ"ಯ ಮುಖಂಡರುಗಳು ಅಸ್ಪೃಶ್ಯತೆಯ ನೋವುಂಡ ಜನರನ್ನು ತಲುಪದೆ, ಹಣ ಅಧಿಕಾರ ಹೊಂದಿದ, ರಾಜಕೀಯ ಜೀತಗಾರರಾದ ದಲಿತ ಮಂತ್ರಿ,ಶಾಸಕರು, ಬೂರ್ಜ್ವಾ ದಲಿತರಾದ ಸರ್ಕಾರೀ ಅಧಿಕಾರಿಗಳನ್ನು ಸೇರಿಸಿಕೊಂಡು, ಡಾ. ಅಂಬೇಡ್ಕರರನ್ನು ಶನಿದೇವರ ರೀತಿಯಲ್ಲೇ ಹಾಡಿ ಹೊಗಳಿ, ಮತಾಂತರ,ಕ್ರಾಂತಿಗಿಂತಿ ಅಂತ ಬೊಬ್ಬೆ ಹಾಕಿದ್ದು, ಈ ದೇಶದ ದಲಿತ ಜನಾಂಗದ ಬಗ್ಗೆ ನಿಜವಾದ ಕಳಕಳಿಹೊಂದಿದ ಯಾರಿಗೇ ಆದರೂ ವಿಷಾದದ ನಗೆ ತರುತ್ತದೆ.

ಸ್ಪೃಶ್ಯರಾದ ಕೆಳಜಾತಿ ಹಾಗೂ ಅಲ್ಪಸಂಖ್ಯಾತರು ಮತ್ತು ಬ್ರಾಹ್ಮಣರಾದಿಯಾಗಿ ಖೋಟಾ ಜಾತಿ ಪತ್ರದ ಮೂಲಕ ಅಸ್ಪೃಶ್ಯರ ಸವಲತ್ತು ಕಬಳಿಸುತ್ತಿರುವುದರ ಬಗ್ಗೆ ಬಹುಶಃ ಈ ಜನಕ್ಕೆ ಗೊತ್ತೇ ಇರಲಿಲ್ಲವೆಂದು ತೋರುತ್ತದೆ ಅಥವಾ ಇದು ಬೇಕಾಗಿರಲಿಲ್ಲವೇನೋ.

ಶೋಷಿತ ಜನರ ಹೆಸರೇಳಿಕೊಂಡು, ಅಧಿಕಾರ, ಅಂತಸ್ತು, ರಾಜಕೀಯ ಸ್ಥಾನ ಮಾನಗಳಿಗಾಗಿ ಈರೀತಿಯ ಸಮ್ಮೇಳನಗಳ ನಾಟಕಮಾಡುವ ಸಣ್ಣಯ್ಯ, ಬಾಲಕೃಷ್ಣ, ಮುಂತಾದವರು ಬರಹ ಸಾಮರ್ಥ್ಯವಿದ್ದೂ ಕಮಂಗಿಯಾಗುತ್ತಿರುವ ಮನಜರಂಥ ಸಾಹಿತಿಗಳೂ ತಾವು ಏನಾಗುತ್ತಿದ್ದೇವೆಂದು ಕೊಂಚ ಯೋಚಿಸುತ್ತಾರೆಂದು ಭಾವಿಸುತ್ತೇನೆ. ಇಲ್ಲಿಯೇ ಇವರುಗಳು ಇಡೀ ಜನಾಂಗಕ್ಕೆ ಶಾಪವಾಗದಂತೆ ಪಾರಾಗುವ ಸೂಕ್ಷ್ಮ ಅಂಶಕೂಡ ಅಡಗಿರುತ್ತದೆಂದು ಸೂಚಿಸುತ್ತೇನೆ.

-ಸೋನಿ

# "ನಿಜವಾದ ಜಾಗದಲ್ಲಿ ಹುಟ್ಟಿದ ಹೊಲೆಮಾದಿಗರು"

ಏಪ್ರಿಲ್ ಇಪ್ಪತ್ತೆರಡನೆಯ ದಿನ ಮಂಡ್ಯದ ರೈತ ಸಭಾಂಗಣದಲ್ಲಿ ನಡೆದ 'ಜಿಲ್ಲಾ ಸಮ್ಮೇಳನ'ವು ತನ್ನದೇ ಆದ, ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿತ್ತು. ದಲಿತರ ಕೊಲೆಸುಲಿಗೆಗೆ ಹೆಸರಾದ ಮಂಡ್ಯದಲ್ಲಿ ದಲಿತ ಸಂಘರ್ಷ ಸಮಿತಿಯು ಸ್ಥಾಪಿಸಿಕೊಂಡ ಸಾಂಸ್ಕೃತಿಕ ಅಸ್ತಿತ್ವವು ಅದಾಗಿತ್ತು.

ಮೊದಲನೆಯ ಗೋಷ್ಠಿಯ ಆರಂಭದ ಭಾಷಣಕಾರರಾದ ಪ್ರಖ್ಯಾತ ಸಾಹಿತಿ ಮನಜರವರು ಡಾ॥ ಅಂಬೇಡ್ಕರ್ ಅವರ ರಾಜಕೀಯ ಹೋರಾಟದ ಇತಿಹಾಸವನ್ನು ಸುಧೀರ್ಘವಾಗಿ ಮಂಡಿಸಿದರು. ಹಿಂದು ಮತಾಂಧರನ್ನು ಅವರು ಸೃಷ್ಟಿಸಿದ ಜಾತಿ ವರ್ಣಗಳನ್ನು ತೀವ್ರವಾಗಿ ಖಂಡಿಸಿದ ಅವರು "ಹಿಂದೂಗಳ ಪ್ರಕಾರ ಬ್ರಾಹ್ಮಣನು ಬ್ರಹ್ಮನ ಮುಖದಿಂದಲು ಕ್ಷತ್ರಿಯರು ಅವನ ತೋಳುಗಳಿಂದಲು ವೈಶ್ಯರು ಮತ್ತು ಕಾಲುಗಳಿಂದಲು ಹುಟ್ಟಿದರೆಂದು ಹಿಂದೂ ಮತಾಂಧರ ಅವಮಾನವೀಯ ಕಲ್ಪನೆ ಎಂದರು.

ಇದೇ ವಿಚ[illegible] ಯಾರರ ಮು[illegible] ಬ್ರಹ್ಮನ ಮುಖ, ತೋಳು ತೊಡೆ ಮತ್ತು ಕಾಲುಗಳಲ್ಲಿ ಹುಟ್ಟಿದರು ಅದೇನೊ ಸರಿ, ಆದರೆ ಈ ಹೊಲೆ ಮಾದಿಗರು ಎಂಬೋರು ಎಲ್ಲಿಂದ ಹುಟ್ಟಿದರು ? ಎಂದು ಕೇಳಲು ಅವರು ಬೇರೆಯವರೆಲ್ಲ ಎಲ್ಲೆಲ್ಲಿಂದ ಹುಟ್ಟಿದ್ದಾರೆ ನನಗೆ ಗೊತ್ತಿಲ್ಲಪ್ಪ ಎಲ್ಲಿಂದ ಹುಟ್ಟಬೇಕೊ ಅಲ್ಲಿಂದ ಹುಟ್ಟಿದವರು ಮಾತ್ರ ಹೊಲೆ ಮಾದಿಗರು ಎಂದು ಉತ್ತರಿಸಿದ್ದನ್ನು ಮನಜ ನೆನಪು ಮಾಡಿದರು.

ದಲಿತ ಸಂಘರ್ಷ ಸಮಿತಿಯ "ಹೋರಾಟ ಮತ್ತು ಮುಂದಿನ ಚಟುವಟಿಕೆಗಳು" ಎಂಬ ವಿಷಯವನ್ನ ಮಂಡಿಸಿದ ಮುಳ್ಳೂರು ನಾಗರಾಜು ನಮಗೆ ಅಕ್ಷರವೆ ಇರಲಿಲ್ಲ. ಅದು ಕಳೆದ ತಲೆಮಾರಿನಲ್ಲು ಈ ತಲೆಮಾರಿನಲ್ಲು ಕೊಂಚ ಕೊಂಚ ಕಾಣಿಸಿಕೊಂಡಿದೆ. ನಾವು ಸದಾ ಶೋಷಿತರು. ಈ ಶೋಷಣೆ ಎಂಬುದಕ್ಕು ಸುಮಾರು ಐದು ಸಾವಿರ ವರ್ಷಗಳ ಇತಿಹಾಸವಿದೆ. ಕಳೆದ ಐದು ಸಾವಿರ [illegible] ೋರಪಾಪವನ್ನ ಸೃಷ್ಟಿ [illegible] ನು ದಲಿ[illegible]

418. ವಿ. ರತ್ನಮ್ಮ,
ವೆಂಕಟೇಶಪ್ಪ, ಚಿಕ್ಕ ತಿರುಪತಿ ಅಂಚೆ
ಮತ್ತು ಹಳ್ಳಿ, ಮಾಲೂರು ತಾ:

ಬ್ರಿಟಿಷ್ ಅಳರಸರ ವಿರುದ್ಧ ಇಂಡಿಯವು ನಡೆಸಿದ ಸ್ವತಂತ್ರ ಹೋರಾಟವನ್ನ ನಮ್ಮ ಶತಮಾನವು ಕಂಡಿದೆ. ಆದರೆ ಅದು ಇಂಡಿಯದ ಉಳ್ಳವರ ವಿಮೋಚನೆಗಾಗಿ ನಡೆದ ಹೋರಾಟ ಎಂಬುದಂತು ನಿಜ. ಆದರೆ ದ,ಸಂ.ಸ ಹೋರಾಟ ಅದಕ್ಕಿಂತ ಭಿನ್ನವಾದದ್ದು. ಹೆಚ್ಚು ಮಹತ್ವ ಪೂರ್ಣವಾದದ್ದು. ನಾವು ರಾಜಕೀಯ ಆಲೋಚನೆಗಳುಳ್ಳವರು. ರಾಜಕೀಯ ಅಧಿಕಾರದ ಮೂಲಕ ರಾಜಕಾರಣವನ್ನು ರಿಪೇರಿ ಮಾಡಲು ಸಾಧ್ಯವಿಲ್ಲದ್ದರಿಂದ ನಮ್ಮ ಆಲೋಚನೆಗಳನ್ನು ನಮ್ಮ ಜನರ ಅಲೋಚನೆಗಳನ್ನಾಗಿಸಲು ತನ್ಮೂಲಕ ನಿಜ ವಿಮೋಚನೆಯ ಕಡೆಗೆ ನಡೆಯುಲು ಸಾಧ್ಯವೆಂದು ನಂಬಿದವರು ಮತ್ತು ಆ ಕಾರಣಕ್ಕಾಗೇ ದಲಿತ ಸಂಘರ್ಷ ಸಮಿತಿಯನ್ನು ನಮ್ಮ ಉಸಿರು ಜೀವ ವೆಂಬಂತೆ ಪ್ರೀತಿಸುತ್ತ ಅದನ್ನು ಕಟ್ಟಲು ಹೊರಟವರು ಎಂದರು.

ಎರಡನೆಗೋಷ್ಠಿ ದಲಿತ ಕವಿ ಮುನಿವೆಂಕಟಪ್ಪನವರ ಅದ್ಯಕ್ಷತೆಯಲ್ಲಿ ನಡೆಯಿತು. ಹುಲ್ಲಿಕೆರೆ [illegible]ಹಾದೇವ ಮಾತಾನಾಡಿದರು.

ಸಂಪಾದಕ : ಗೋವಿಂದಯ್ಯ, ವಿನಯ ಪ್ರಿಂಟರ್ಸ್ 2514, ಕೆ.ಜಿ. ಕೊಪ್ಪಲು, ಮೈಸೂರು-14. ಫೋನ್ : 26142